# ಪ್ರವಾದಿ
# ಜೀವನ ಸಂದೇಶ

ಸಯ್ಯದ್ ಅಬುಲ್ ಆಲಾ ಮೌದೂದಿ

ಪರಮ ದಯಾಮಯನೂ ಕರುಣಾನಿಧಿಯೂ ಆದ ಅಲ್ಲಾಹನ ನಾಮದಿಂದ

# ಪ್ರಕಾಶಕರ ಮಾತು

ಖ್ಯಾತ ಇಸ್ಲಾಮೀ ಚಿಂತಕ ಸಯ್ಯಿದ್ ಅಬುಲ್ ಆಲಾ ಮೌದೂದಿಯವರು 1975ರ ಅಕ್ಟೋಬರ್ 22ರಂದು ಪಂಜಾಬ್ ವಿಶ್ವವಿದ್ಯಾಲಯದ ವಿದ್ಯಾರ್ಥಿ ಒಕ್ಕೂಟದ ಕೋರಿಕೆಯಂತೆ ಸದ್ರಿ ವಿಶ್ವವಿದ್ಯಾಲಯದ ಆವರಣದಲ್ಲಿ ಒಂದು ಭಾಷಣ ಮಾಡಿದ್ದರು. ಪ್ರಸ್ತುತ ಭಾಷಣದ ಕನ್ನಡಾನುವಾದ ರೂಪವನ್ನು 'ಪ್ರವಾದಿ ಜೀವನ ಸಂದೇಶ' ಎಂಬ ಈ ಕೃತಿಯಲ್ಲಿ ವಾಚಕರ ಮುಂದಿಡುತ್ತಿದ್ದೇವೆ.

ಇಸ್ಲಾಮಿನ ಬಗ್ಗೆ ಆಧುನಿಕ ಚಿಂತನೆಗಳಿಗೆ ಸ್ಪಂದಿಸಿ ವೈಜ್ಞಾನಿಕ ಪುರಾವೆಗಳೊಂದಿಗೆ ವಿಷಯಗಳನ್ನು ಸಮರ್ಪಿಸುವ ಮೌಲಾನಾ ಮೌದೂದಿಯವರ ನಿರೂಪಣಾ ಶೈಲಿಯನ್ನು ಈ ಕಿರು ಹೊತ್ತಗೆಯಲ್ಲೂ ಕಾಣಬಹುದಾಗಿದೆ. ವಿಜ್ಞಾನ - ತಂತ್ರಜ್ಞಾನ ಕ್ಷೇತ್ರಗಳಲ್ಲಿ ಸಾಕಷ್ಟು ಅಭಿವೃದ್ಧಿಯನ್ನು ಸಾಧಿಸಿರುವ ಮಾನವಕುಲಕ್ಕೆ ಪ್ರವಾದಿಯವರ ಜೀವನ ಚರ್ಯೆ ಎಷ್ಟು ಅವಶ್ಯಕ ಎಂಬುದನ್ನು ಇದರಲ್ಲಿ ಅವರು ಸ್ಪಷ್ಟಪಡಿಸಿದ್ದಾರೆ. ಯಾವುದೇ ಬಗೆಯ ಪೂರ್ವಗ್ರಹವಿಲ್ಲದೆ ಪ್ರವಾದಿಯವರ ಜೀವನ ಚರ್ಯೆಯನ್ನು ಅಧ್ಯಯನ ಮಾಡ ಬಯಸುವವರಿಗೆ ಈ ಕೃತಿ ಬಹಳ ಪ್ರಯೋಜನಕಾರಿಯಾಗಿದೆ.

ಶಾಂತಿ ಪ್ರಕಾಶನ

# ಅನುಕ್ರಮಣಿಕೆ

# ಪ್ರವಾದಿ ಜೀವನ ಸಂದೇಶ

ಮಾನ್ಯ ಉಪಕುಲಪತಿಯವರೇ, ವಿದ್ಯಾರ್ಥಿ ಒಕ್ಕೂಟದ ಅಧ್ಯಕ್ಷರೇ, ವಿದ್ಯಾರ್ಥಿ - ವಿದ್ಯಾರ್ಥಿನಿಯರೇ!

ತಮ್ಮ ಈ ಸಭೆಯಲ್ಲಿ ಪ್ರವಾದಿ ಮುಹಮ್ಮದ್(ಸ) ಜೀವನಚರ್ಯೆಯ ಸಂದೇಶದ ಬಗ್ಗೆ ಮಾತನಾಡಲು ನನ್ನನ್ನು ಆಮಂತ್ರಿಸಲಾಗಿದೆ. ಈ ವಿಷಯದ ಕುರಿತು ತಾರ್ಕಿಕವಾಗಿ ಮಾತನಾಡುವುದಾದರೆ ಓರ್ವ ಪ್ರವಾದಿಯ ಜೀವನಚರ್ಯೆಯ ಸಂದೇಶವೇ ಏಕೆ? ಇನ್ನಿತರರ ಸಂದೇಶ ಏಕಾಗಬಾರದು? ಪ್ರವಾದಿಗಳಲ್ಲೂ ಪ್ರವಾದಿ ಮುಹಮ್ಮದ್(ಸ) ಜೀವನಚರ್ಯೆಯ ಸಂದೇಶವೇ ಏಕೆ? ಇತರ ಪ್ರವಾದಿಗಳ ಮತ್ತು ಧಾರ್ಮಿಕ ನಾಯಕರ ಜೀವನ ಸಂದೇಶ ಯಾಕಾಗಬಾರದು? ಎಂಬ ಪ್ರಶ್ನೆ ಮೊಟ್ಟ ಮೊದಲು ಉದ್ಭವಿಸುತ್ತದೆ. ಆರಂಭದಲ್ಲೇ ಈ ಪ್ರಶ್ನೆಯ ಬಗ್ಗೆ ಚರ್ಚಿಸಬೇಕಾಗುತ್ತದೆ. ಏಕೆಂದರೆ ಮಾರ್ಗದರ್ಶನವನ್ನು ಆಧುನಿಕ ಅಥವಾ ಗತಕಾಲದ ಯಾವನೇ ನಾಯಕನ ಜೀವನಚರ್ಯೆಯಿಂದಲ್ಲ, ಓರ್ವ ಪ್ರವಾದಿಯ ಜೀವನದಿಂದ ಮಾತ್ರ ಪಡೆಯಲು ಸಾಧ್ಯವಿದೆ. ಅದರಲ್ಲೂ ಇತರ ಪ್ರವಾದಿಗಳ ಅಥವಾ ಧಾರ್ಮಿಕ ನಾಯಕರ ಜೀವನ ದಿಂದಲ್ಲ; ಮುಹಮ್ಮದ್(ಸ) ಜೀವನದಿಂದ ಮಾತ್ರ ನಮಗೆ ಅಗತ್ಯವಾದ ನೈಜ ಮತ್ತು ಸಮಗ್ರ ಮಾರ್ಗದರ್ಶನ ದೊರೆಯಲು ಸಾಧ್ಯವಿದೆ ಎಂಬುದು ನಮಗೆ ಪೂರ್ಣ ಮನವರಿಕೆಯಾಗಬೇಕು.

## ದೈವಿಕ ಮಾರ್ಗದರ್ಶನದ ಔಚಿತ್ಯ

ನಿಸರ್ಗವನ್ನು ಸಜ್ಜುಗೊಳಿಸಿ ಅದರಲ್ಲಿ ಮಾನವನನ್ನು ಸೃಷ್ಟಿಸಿದ ದೇವನೇ ಜ್ಞಾನದ ಮೂಲವಾಗಿದ್ದಾನೆ ಎಂಬುದು ನಿರಾಕರಿಸಲಾಗದ ಸತ್ಯವಾಗಿದೆ. ನಿಸರ್ಗದ ರಹಸ್ಯಗಳು, ಮಾನವನ ಸ್ವಭಾವ ಮತ್ತು ಅದರ ವಾಸ್ತವಿಕತೆಗಳ ಜ್ಞಾನ ಅವನಿಗಲ್ಲದೆ ಮತ್ತಾರಿಗೆ

ಇರಲು ಸಾಧ್ಯ? ಸೃಷ್ಟಿಯ ಬಗೆಗಿನ ಜ್ಞಾನ ಅವನಿಗಲ್ಲದೆ ಮತ್ತಾರಿಗೆ ಇರಲು ಸಾಧ್ಯ? ಸೃಷ್ಟಿಯ ಬಗೆಗಿನ ಜ್ಞಾನ ಅದರ ಸೃಷ್ಟಿಕರ್ತನಿಗೆ ಮಾತ್ರವಿರುತ್ತದೆ. ಸೃಷ್ಟಿಗಳಲ್ಲಿ ತಿಳುವಳಿಕೆ ಇದ್ದರೂ ಅದು ಸೃಷ್ಟಿಕರ್ತನು ತಿಳಿಸುವುದರಿಂದಲೇ ಆಗಿದೆ. ವಾಸ್ತವಿಕತೆಗಳನ್ನು ಪತ್ತೆ ಹಚ್ಚಲು ಅದರ ಬಳಿ ತನ್ನದೇ ಆದ ಯಾವುದೇ ಮಾಧ್ಯಮ ಇರುವುದಿಲ್ಲ.

ಈ ನಿಟ್ಟಿನಲ್ಲಿ ತಪ್ಪು ನಿರ್ಧಾರಕ್ಕೆ ಆಸ್ಪದವಾಗದಂತೆ ಎರಡು ವಿಧದ ವಸ್ತುಗಳ ನಡುವಿನ ವ್ಯತ್ಯಾಸವನ್ನು ನೀವು ಚೆನ್ನಾಗಿ ತಿಳಿದುಕೊಳ್ಳಬೇಕಾಗಿದೆ.

ಮೊದಲನೆಯ ವಿಧದ ವಸ್ತುಗಳು ನೀವು ಇಂದ್ರಿಯಗಳ ಮೂಲಕ ಅನುಭವಿಸುವಂತಹದ್ದಾಗಿದೆ. ಅವುಗಳ ಮೂಲಕ ಗಳಿಸುವ ಜ್ಞಾನವನ್ನು ನೀವು ಚಿಂತನೆ, ವೀಕ್ಷಣೆ ಮತ್ತು ಅನುಭವಗಳ ಸಹಾಯದಿಂದ ಕ್ರೋಢೀಕರಿಸಿ ಹೊಸ ಹೊಸ ಫಲಿತಾಂಶಗಳನ್ನು ಪಡೆಯಬಹುದಾಗಿದೆ. ಇಂತಹ ವಸ್ತುಗಳ ಬಗ್ಗೆ ಯಾವುದೇ ದಿವ್ಯಜ್ಞಾನ ಬರಬೇಕಾದ ಅಗತ್ಯವಿಲ್ಲ. ಇದು ಸ್ವತಃ ನಿಮ್ಮ ಬಯಕೆ, ಚಿಂತನೆ ಮತ್ತು ಸಂಶೋಧನೆಯ ವರ್ತುಲವಾಗಿದೆ. ನಿಮ್ಮ ಸುತ್ತಮುತ್ತ ಅಸ್ತಿತ್ವದಲ್ಲಿರುವ ವಸ್ತುಗಳನ್ನು ಹುಡುಕಿ ತೆಗೆದು, ಅದರಲ್ಲಿ ಕಾರ್ಯತತ್ಪರವಾಗಿರುವ ಶಕ್ತಿಯನ್ನು ಪತ್ತೆ ಹಚ್ಚಿ, ಅದರ ಮೇಲೆ ಪ್ರಯೋಗವಾಗುತ್ತಿರುವ ನಿಯಮಗಳನ್ನು ಅರಿತು ಪ್ರಗತಿಪಥದಲ್ಲಿ ಮುಂದುವರಿಯು ವುದು ನಿಮಗೇ ಬಿಟ್ಟಿರುವ ವಿಚಾರವಾಗಿದೆ. ಈ ವಿಷಯದಲ್ಲೂ ನಿಮ್ಮ ಪ್ರಭು ನಿಮ್ಮನ್ನು ಸಂಪೂರ್ಣ ಕೈಬಿಟ್ಟಿಲ್ಲ. ಇತಿಹಾಸದ ವಿವಿಧ ಘಟ್ಟಗಳಲ್ಲಿ ಅವನು ತಾನು ಸೃಷ್ಟಿಸಿರುವ ಜಗತ್ತನ್ನು ನಿಮಗರಿವಿಲ್ಲದಂತೆಯೇ ನಿಮಗೆ ಪರಿಚಯಿಸುತ್ತಾ ಬಂದಿದ್ದಾನೆ. ತಿಳುವಳಿಕೆಯ ಹೊಸ ಹೊಸ ದ್ವಾರಗಳನ್ನು ನಿಮಗಾಗಿ ತೆರೆಯುತ್ತಾ ಬಂದಿದ್ದಾನೆ. ಯಾವನಾದರೊಬ್ಬ ವ್ಯಕ್ತಿಗೆ ಅವನೊಂದು ಹೊಸ ಸಂಶೋಧನೆ ಮಾಡುವಂತೆ, ಇಲ್ಲವೇ ಒಂದು ಹೊಸ ನಿಯಮವನ್ನು ಕಂಡು ಹಿಡಿಯುವಂತೆ ಆಗಾಗ ದಿವ್ಯ ಜ್ಞಾನವನ್ನು ನೀಡುತ್ತಾ ಬಂದಿದ್ದಾನೆ. ಆದರೂ ಇದು ಮನುಷ್ಯನ ಜ್ಞಾನದ ಕ್ಷೇತ್ರವೇ ಆಗಿದೆ. ಇದಕ್ಕೆ ಯಾವುದೇ ಪ್ರವಾದಿಯ ಅಥವಾ ಗ್ರಂಥದ ಅವಶ್ಯಕತೆ ಇಲ್ಲ. ಈ ಕ್ಷೇತ್ರದಲ್ಲಿ ಅಪೇಕ್ಷಣೀಯವಾದ ಜ್ಞಾನವನ್ನು ಸಂಪಾದಿಸಲು ಬೇಕಾದ ಸಾಧನೆಗಳನ್ನು ಮನುಷ್ಯನಿಗೆ ನೀಡಲಾಗಿದೆ.

ಎರಡನೆಯ ವಿಧದ ವಸ್ತುಗಳು ನಮ್ಮ ಇಂದ್ರಿಯಗಳಿಗೆ ಅತೀತವಾದುದಾಗಿವೆ. ಅವುಗಳನ್ನು ಯಾವ ರೀತಿಯಲ್ಲೂ ಗ್ರಹಿಸಿಕೊಳ್ಳಲು ನಮಗೆ ಸಾಧ್ಯವಿಲ್ಲ. ಅವುಗಳನ್ನು

ತೂಗುವುದಾಗಲಿ, ಅಳೆಯುವುದಾಗಲಿ ಅಥವಾ ನಮಗೆ ತಿಳಿದಿರುವ ಮಾಧ್ಯಮಗಳಲ್ಲಿ ಯಾವುದನ್ನಾದರೂ ಉಪಯೋಗಿಸಿ ಅವುಗಳನ್ನು ಪತ್ತೆ ಹಚ್ಚುವುದಾಗಲಿ ಸಾಧ್ಯವಿಲ್ಲ. ವಿಜ್ಞಾನಿ - ತತ್ವಜ್ಞಾನಿಗಳು ಅದರ ಬಗ್ಗೆ ಯಾವುದೇ ನಿಲುಮೆಯನ್ನು ತಾಳಿದರೆ, ಅದು ಕೇವಲ ಊಹೆಯನ್ನು ಆಧರಿಸಿಯೇ ವಿನಾ ಅದನ್ನು ನಿಖರ ಜ್ಞಾನವೆನ್ನುವಂತಿಲ್ಲ. ಈ ಪರಮ ಸತ್ಯಗಳ (Ultimate realities) ಬಗ್ಗೆ ರೂಪಿಸಲಾಗಿರುವ ಸಿದ್ಧಾಂತಗಳ ಕುರಿತು ಸ್ವತಃ ಆ ಸಿದ್ಧಾಂತಗಳನ್ನು ಸಮರ್ಪಿಸಿರುವವರೂ ಇದು ಸಂಪೂರ್ಣ ವಿಶ್ವಸ್ಥ ಎಂದು ಭಾವಿಸಲಾರರು. ಮಾತ್ರವಲ್ಲ ಅವರಿಗೆ ತಮ್ಮ ಜ್ಞಾನವು ಎಷ್ಟು ಸೀಮಿತ ಎಂಬ ಅರಿವಿದ್ದರೆ ಖಂಡಿತ ಅವರು ಸ್ವತಃ ಅದರ ಮೇಲೆ ವಿಶ್ವಾಸ ತಾಳಲಾರರು ಮತ್ತು ಇತರರಿಗೂ ಅದನ್ನು ಪ್ರಚಾರಪಡಿಸಲಾರರು.

## ಪ್ರವಾದಿಗಳ ಅನುಸರಣೆಯ ಅಗತ್ಯ

ಅಲ್ಲಾಹನ ಮಾರ್ಗದರ್ಶನದ ಮೂಲಕ ಮಾತ್ರ ಈ ಕ್ಷೇತ್ರಕ್ಕೆ ಜ್ಞಾನ ತಲುಪಲು ಸಾಧ್ಯವಿದೆ. ಈ ಜ್ಞಾನ ತಲುಪಿಸಲು ಇರುವ ಮಾಧ್ಯಮ ವಹೀ ಅಥವಾ ದೇವವಾಣಿ ಯಾಗಿದೆ. ಅದು ಪ್ರವಾದಿಗಳ ಮೇಲೆ ಮಾತ್ರ ಅವತೀರ್ಣಗೊಳ್ಳುತ್ತದೆ. ಅಲ್ಲಾಹನು ಈ ತನಕ ಎಂದೂ ಒಂದು ಗ್ರಂಥವನ್ನು ಅಚ್ಚು ಹಾಕಿ ಮನುಷ್ಯನ ಕೈಗಿತ್ತು 'ಇದೋ ಈ ಗ್ರಂಥವನ್ನು ಓದಿ ನಿನ್ನ ಮತ್ತು ನಿಸರ್ಗದ ವಾಸ್ತವಿಕತೆಗಳೇನು ಮತ್ತು ಆ ವಾಸ್ತವಿಕತೆಗಳ ಆಧಾರದಲ್ಲಿ ನಿನ್ನ ವರ್ತನೆ ಹೇಗಿರಬೇಕು ಎಂದು ಸ್ವತಃ ಅರಿತುಕೋ' ಎಂದು ಹೇಳಿಲ್ಲ. ಈ ಜ್ಞಾನವನ್ನು ಮನುಷ್ಯರಿಗೆ ತಲುಪಿಸಲು ಅವನು ಸದಾ ಪ್ರವಾದಿಗಳನ್ನೇ ಮಧ್ಯವರ್ತಿಗಳನ್ನಾಗಿ ಮಾಡಿದ್ದಾನೆ. ಏಕೆಂದರೆ ಅವರು ಈ ಜ್ಞಾನದ ಬಗ್ಗೆ ಮನುಷ್ಯರಿಗೆ ಬೋಧನೆ ನೀಡುವುದರ ಜೊತೆಗೆ ಅದನ್ನು ವಿವರಿಸಿ ಹೇಳಿ ಅದರಂತೆ ನಡೆದು ತೋರಿಸಬೇಕಿತ್ತು. ಅದರ ವಿರುದ್ಧ ನಡೆಯುವವರನ್ನು ಸನ್ಮಾರ್ಗಕ್ಕೆ ತರಲು ಪ್ರಯತ್ನಿಸುವುದರೊಂದಿಗೆ ಅದನ್ನು ಸ್ವೀಕರಿಸಿದವರ ಜೀವನದ ಪ್ರತಿಯೊಂದು ರಂಗವೂ ಆ ಜ್ಞಾನದ ಪ್ರತೀಕವೆನ್ನುವಂತೆ, ಅವರನ್ನು ಒಂದು ಸಮಾಜದ ರೂಪದಲ್ಲಿ ವ್ಯವಸ್ಥಿತಗೊಳಿಸಬೇಕಾಗಿತ್ತು.

ಈ ಸಂಕ್ಷಿಪ್ತವಾದ ವಿವರಣೆಯಿಂದ ಮಾರ್ಗದರ್ಶನ ಪಡೆಯಲು ನಮಗೊಂದು ಪ್ರವಾದಿಯ ಜೀವನಚರ್ಯೆಯೇ ಬೇಕಾಗಿದೆ. ಪ್ರವಾದಿಯ ಅನುಸರಣೆ ಮಾಡದ ಒಬ್ಬ

ವ್ಯಕ್ತಿ ಎಂತಹ ಜ್ಞಾನ ಸಂಪನ್ನ ಮತ್ತು ಕುಶಾಗ್ರಮತಿಯಾಗಿದ್ದರೂ ಅವನು ನಮ್ಮ ಮಾರ್ಗದರ್ಶಿಯಾಗಲಾರ ಎಂದು ಸ್ಪಷ್ಟವಾಗುತ್ತದೆ. ಏಕೆಂದರೆ ಅವನ ಬಳಿ ವಾಸ್ತವಿಕತೆಯ ಜ್ಞಾನವಿರುವುದಿಲ್ಲ ಮತ್ತು ವಾಸ್ತವಿಕತೆಯ ಜ್ಞಾನವಿಲ್ಲದವನು ಸರಿಯಾದ ಮತ್ತು ವಾಸ್ತವಿಕ ಜೀವನ ವ್ಯವಸ್ಥೆಯನ್ನು ನಮಗೆ ನೀಡಲಾರನು.

## ಸನ್ಮಾರ್ಗಸಿದ್ಧಿ ಪ್ರವಾದಿ ಮುಹಮ್ಮದ್‌ರಿಂದ(ಸ) ಮಾತ್ರವೇಕೆ?

ನಾವು ಪ್ರವಾದಿಗಳೆಂದು ತಿಳಿದ ಶ್ರೇಷ್ಠ ವ್ಯಕ್ತಿಗಳು ಮತ್ತು ಪ್ರವಾದಿಗಳೆಂದು ಭಾವಿಸಬಹುದಾದ ಧಾರ್ಮಿಕ ನಾಯಕರುಗಳ ಪೈಕಿ ಪ್ರವಾದಿ ಮುಹಮ್ಮದ್‌ರ(ಸ) ಜೀವನ ಚರ್ಯೆಯಿಂದ ಮಾತ್ರ ಸಂದೇಶವನ್ನು ಪಡೆಯಲು ನಾವೇಕೆ ಪ್ರಯತ್ನಿಸುತ್ತೇವೆ ಎಂಬ ಪ್ರಶ್ನೆಯನ್ನು ಈಗ ತೆಗೆದುಕೊಳ್ಳೋಣ. ಯಾವುದೇ ಪಕ್ಷಪಾತ ಇದಕ್ಕೆ ಕಾರಣವೇ ಅಥವಾ ಬೇರೆ ಯಾವುದಾದರೂ ಸೂಕ್ತ ಕಾರಣಗಳಿವೆಯೇ?

ಹೌದು! ಇದಕ್ಕೊಂದು ಸೂಕ್ತ ಕಾರಣವಿದೆ. ಪವಿತ್ರ ಕುರ್‌ಆನಿನಲ್ಲಿ ಪ್ರಸ್ತಾಪಿಸಲಾಗಿರುವ ಪ್ರವಾದಿಗಳನ್ನು ನಿಶ್ಚಯವಾಗಿಯೂ ನಾವು ಪ್ರವಾದಿಗಳೆಂದು ಒಪ್ಪುತ್ತೇವೆ. ಆದರೆ ನಾವು ಅವರನ್ನು ಅನುಸರಿಸಲು ಅವರ ಪೈಕಿ ಯಾರದೇ ಬೋಧನೆಯಾಗಲಿ, ಜೀವನಚರ್ಯೆಯಾಗಲಿ ನಮಗೆ ನಂಬಲರ್ಹ ಮೂಲಗಳಿಂದ ಪ್ರಾಪ್ತವಾಗಿಲ್ಲ. ಹ. ನೂಹ್, ಹ. ಇಬ್‌ರಾಹೀಮ್, ಹ. ಇಸ್‌ಹಾಕ್, ಹ. ಯೂಸುಫ್, ಹ. ಮೂಸಾ ಮತ್ತು ಹ. ಈಸಾ (ಅಲೈಹಿಮುಸ್ಸಲಾಮ್) ನಿಶ್ಚಯವಾಗಿಯೂ ಪ್ರವಾದಿಗಳೇ ಆಗಿದ್ದರು. ನಾವು ಅವರೆಲ್ಲರ ಮೇಲೆ ವಿಶ್ವಾಸ ಹೊಂದಿದ್ದೇವೆ. ಆದರೆ ನಾವು ಅವರಿಂದ ಮಾರ್ಗದರ್ಶನವನ್ನು ಪಡೆಯಲು ಅವರ ಮೇಲೆ ಅವತೀರ್ಣಗೊಂಡ ಯಾವುದೇ ಗ್ರಂಥ ಇಂದು ಸುರಕ್ಷಿತವಾಗಿ ಉಳಿದಿಲ್ಲ. ವೈಯಕ್ತಿಕ ಮತ್ತು ಸಾಮೂಹಿಕ ಜೀವನದ ವಿವಿಧ ರಂಗಗಳಲ್ಲಿ ಅವರನ್ನು ಮಾರ್ಗದರ್ಶಿ ಎಂದು ಪರಿಗಣಿಸಲು ಅವರ ಪೈಕಿ ಯಾರ ಜೀವನವೂ ವಿಶ್ವಾಸಾರ್ಹ ರೀತಿಯಿಂದ ನಮ್ಮ ಬಳಿ ಬಂದು ತಲುಪಿಲ್ಲ. ಆ ಎಲ್ಲ ಪ್ರವಾದಿಗಳ ಬೋಧನೆಗಳು ಮತ್ತು ಜೀವನಚರ್ಯೆಯ ಬಗ್ಗೆ ಯಾರಾದರೂ ಬರೆಯ ಬಯಸಿದರೆ ಕೆಲವು ಪುಟಗಳಿಗಿಂತ ಹೆಚ್ಚು ಬರೆಯಲಾರ. ಅದೂ ಕುರ್‌ಆನಿನ ಸಹಾಯದಿಂದಲೇ ಸಾಧ್ಯ. ಏಕೆಂದರೆ ಕುರ್‌ಆನನ್ನು ಬಿಟ್ಟರೆ ಅವರ ಬಗ್ಗೆ ಬೇರಾವುದರಲ್ಲಿಯೂ ವಿಶ್ವಾಸಾರ್ಹ ವಿವರಗಳು ಲಭ್ಯವಿಲ್ಲ.

## ಯಹೂದಿ ಧರ್ಮ ಗ್ರಂಥಗಳ ಮತ್ತು ಪ್ರವಾದಿಗಳ ಅವಸ್ಥೆ

ಪ್ರವಾದಿ ಮೂಸಾ ಮತ್ತು ಅವರ ನಂತರದ ಪ್ರವಾದಿಗಳು ಹಾಗೂ ಅವರ ಬೋಧನೆಗಳ ವಿವರ ಬೈಬಲ್‌ನ ಹಳೆ ಒಡಂಬಡಿಕೆ(Old Testament)ಯಲ್ಲಿದೆ ಎಂದು ಹೇಳಲಾಗುತ್ತದೆ. ಆದರೆ ಐತಿಹಾಸಿಕ ದೃಷ್ಟಿಕೋನದಿಂದ ಸ್ವಲ್ಪ ಬೈಬಲ್‌ನ ಅವಲೋಕನ ಮಾಡಿ ನೋಡಿ. ಮೂಸಾರವರ(ಅ) ಮೇಲೆ ಅವತೀರ್ಣಗೊಂಡ ನೈಜ ತೌರಾತ್ ಕ್ರಿ.ಪೂ. 6ನೆಯ ಶತಮಾನದಲ್ಲಿ 'ಬೈತುಲ್ ಮಕ್ದಿಸ್'ನ ವಿನಾಶದ ವೇಳೆಯೇ ಕಳೆದುಹೋಗಿತ್ತು. ಅದರ ಜೊತೆಗೇ ಪೂರ್ವಕಾಲದ ಇತರ ಗ್ರಂಥಗಳೂ ನಾಶವಾಗಿದ್ದವು. ಕ್ರಿಸ್ತ ಪೂರ್ವ 5ನೆಯ ಶತಮಾನದಲ್ಲಿ ಬನೀ ಇಸ್ರಾಈಲರು ಬ್ಯಾಬಿಲೋನಿಯಾದಿಂದ ಬಂಧಮುಕ್ತರಾಗಿ ಫೆಲೆಸ್ತೀನ್ ತಲಪಿದ ನಂತರ ಹ.ಉಝೈರ್ (Ezra) ಇತರ ಕೆಲವು ಹಿರಿಯರ ಸಹಾಯದಿಂದ ಹ. ಮೂಸಾರ ಜೀವನಚರ್ಯೆ ಮತ್ತು ಬನೀಇಸ್ರಾಈಲ್‌ರ ಚರಿತ್ರೆಯನ್ನು ಕ್ರೋಢೀಕರಿಸಿದರು. ಅದಕ್ಕೆ ತಮಗೂ ತಮ್ಮ ಸಹಾಯಕರಿಗೂ ಸಿಕ್ಕ 'ತೌರಾತ್'ನ ಸೂಕ್ತಗಳನ್ನು ಸಂದರ್ಭಾನುಸಾರ ಸೇರಿಸಿದರು. ಅನಂತರ ಕ್ರಿ.ಪೂ. 4ನೆಯ ಶತಮಾನದಿಂದ 2ನೆಯ ಶತಮಾನದ ತನಕ ಅನೇಕರು (ಅವರು ಯಾರು ಎಂದು ತಿಳಿದಿಲ್ಲ) ತಮಗಿಂತ ಅನೇಕ ಶತಮಾನಗಳ ಹಿಂದೆ ಗತಿಸಿದ ಪ್ರವಾದಿಗಳ ಗ್ರಂಥಗಳನ್ನು ಬರೆದರು. (ಯಾವ ಮೂಲವನ್ನು ಆಧಾರವಾಗಿಟ್ಟು ಬರೆದರೆಂದು ತಿಳಿದಿಲ್ಲ) ಉದಾಹರಣೆಗೆ ಯಾರೋ ಒಬ್ಬರು ಕ್ರಿ.ಪೂ. 300ರಲ್ಲಿ ಹ.ಯೂನುಸ್‌ರ(ಅ) ಹೆಸರಲ್ಲಿ ಒಂದು ಅಧ್ಯಾಯವನ್ನು ಬರೆದು ಬೈಬಲ್‌ಗೆ ಸೇರಿಸಿದರು. ಅವರಾದರೋ ಕ್ರಿ.ಪೂ. 8ನೆಯ ಶತಮಾನದ ಪ್ರವಾದಿಯಾಗಿದ್ದರು. ಝುಬೂರ(Psalms)ನ್ನು ಪ್ರವಾದಿ ಹ. ದಾವೂದ್‌ರ(ಅ) ನಿಧನದ ಐನೂರು ವರ್ಷಗಳ ನಂತರ ಬರೆಯಲಾಗಿದೆ. ಅದರಲ್ಲಿ ಹ.ದಾವೂದ್‌ರ(ಅ) ಹೊರತು ಇತರ ಸುಮಾರು ನೂರು ಮಂದಿ ಕವಿಗಳ ಕಾವ್ಯಗಳೂ ಸೇರಿವೆ. ಅದು ಝುಬೂರನ್ನು ಕ್ರೋಢೀಕರಿಸಿದವರಿಗೆ ಎಲ್ಲಿಂದ ಲಭ್ಯವಾಗಿತ್ತೋ ತಿಳಿಯದು. ಹ.ಸುಲೈಮಾನ್(ಅ) ಕ್ರಿ.ಪೂ. 933ರಲ್ಲಿ ನಿಧನರಾಗಿದ್ದಾರೆ ಅವರ ನಾಣ್ಣುಡಿ(Proverbs)ಗಳನ್ನು ಕ್ರಿ.ಪೂ. 250ರಲ್ಲಿ ಬರೆಯಲಾಗಿದೆ ಮತ್ತು ಅದರಲ್ಲಿ ಇತರ ಅನೇಕ ದಾರ್ಶನಿಕರ ಹೇಳಿಕೆಗಳನ್ನು ಸೇರಿಸಲಾಗಿದೆ.

ಒಟ್ಟಿನಲ್ಲಿ ಬೈಬಲ್‌ನ ಯಾವ ಗ್ರಂಥದ ಆಧಾರ ಪ್ರಮಾಣಗಳೂ ಅದರಲ್ಲಿ ಸೂಚಿಸಲಾಗಿರುವ ವ್ಯಕ್ತಿಗಳನ್ನು ಹೋಗಿ ಸೇರುವುದಿಲ್ಲ. ಅಷ್ಟೇ ಅಲ್ಲದೆ ಹಿಬ್ರೂ ಭಾಷೆಯಲ್ಲಿದ್ದ ಬೈಬಲ್‌ನ ಪ್ರತಿಗಳೂ ಕ್ರಿ. ಶ. 70ರಲ್ಲಿ 'ಬೈತುಲ್ ಮಕ್ದಿಸ್' ಎರಡನೆಯ ಬಾರಿ ನಾಶವಾದಾಗ ಕಳೆದು ಹೋಗಿವೆ. ಕ್ರಿ.ಪೂ. 258ರಿಂದ ಕ್ರಿ.ಪೂ. ಒಂದನೆಯ ಶತಮಾನದ ತನಕ ಕ್ರೋಢೀಕರಿಸಲ್ಪಟ್ಟ ಅದರ ಗ್ರೀಕ್ ತರ್ಜುಮೆ ಮಾತ್ರ ಉಳಿದುಕೊಂಡಿತು. ಹಿಬ್ರೂ ಭಾಷೆಯ ಬೈಬಲನ್ನು ಆಗ ಉಳಿದಿದ್ದ ಕರಡು ಪ್ರತಿಗಳ ಸಹಾಯದಿಂದ ಯಹೂದಿ ವಿದ್ವಾಂಸರು ಕ್ರಿ.ಶ. ಎರಡನೆಯ ಶತಮಾನದಲ್ಲಿ ಕ್ರೋಢೀಕರಿಸಿದ್ದರು. ಈಗ ಉಳಿದಿರುವ ಅದರ ಪುರಾತನ ಪ್ರತಿ ಕ್ರಿ.ಶ. 916ರಲ್ಲಿ ಬರೆದದ್ದಾಗಿದೆ. ಅದರ ಹೊರತು ಹಿಬ್ರೂ ಭಾಷೆಯ ಬೇರಾವುದೇ ಪ್ರತಿ ಈಗ ಲಭ್ಯವಿಲ್ಲ. ಮೃತಸಾಗರದ ಬಳಿಯಲ್ಲಿನ ಕುಮ್ರಾನ್ ಗುಹೆಯಲ್ಲಿ ಸಿಕ್ಕಿರುವ ಸುರುಳಿ (Scrolls)ಗಳೂ ಹೆಚ್ಚೆಂದರೆ ಕ್ರಿ.ಪೂ. ಒಂದನೆಯ ಅಥವಾ ಎರಡನೆಯ ಶತಮಾನ ದಲ್ಲಿ ಬರೆಯಲಾಗಿದ್ದು, ಅದರಲ್ಲಿ ಬೈಬಲ್‌ನ ಕೆಲವು ಛಿದ್ರ ಭಾಗಗಳು ಮಾತ್ರ ಇವೆ. ಸಮೇರಿಯನ್ನರ (Samaritans) ಬಳಿ ಜಾರಿಯಲ್ಲಿರುವ ಅದರ ಪ್ರಥಮ ಪಂಚ ಗ್ರಂಥಗಳ ಸಂಕಲನವನ್ನು ಕ್ರಿ.ಶ. 11ನೆಯ ಶತಮಾನದಲ್ಲಿ ಬರೆಯಲಾಗಿದೆ. ಕ್ರಿ.ಪೂ. 3 ಮತ್ತು 2ನೆಯ ಶತಮಾನದಲ್ಲಿ ಬರೆಯಲಾದ ಗ್ರೀಕ್ ತರ್ಜುಮೆಯಲ್ಲಿ ಅನೇಕ ತಪ್ಪುಗಳಿದ್ದುವು. ಈ ಅನುವಾದ ಪ್ರತಿಯನ್ನು ಕ್ರಿ.ಶ. ಎರಡು ಮತ್ತು ಮೂರರಲ್ಲಿ ಲ್ಯಾಟಿನ್ ಭಾಷೆಗೆ ತರ್ಜುಮೆ ಮಾಡಲಾಯಿತು. ಪ್ರವಾದಿ ಮೂಸಾ ಮತ್ತು ಬನೀಇಸ್ರಾಈಲರ ಇತರ ಪ್ರವಾದಿಗಳ ಸ್ಥಿತಿಗತಿ ಮತ್ತು ಬೋಧನೆಗಳ ಬಗ್ಗೆ ಇರುವ ಈ ವಿವರವನ್ನು ಅಧಿಕೃತ(Authentic) ಎಂದು ಯಾವ ಮಾನದಂಡದಿಂದ ಹೇಳಲು ಸಾಧ್ಯ?

ಇದಲ್ಲದೆ ಯಹೂದಿಯರಲ್ಲಿ ಮೌಖಿಕ ಕಾನೂನು(Oral law) ಎಂದು ಕರೆಯಲ್ಪಡುವ ಕೆಲವು ಪರಂಪರಾಗತ ಸಂಪ್ರದಾಯಗಳೂ ಅಸ್ತಿತ್ವದಲ್ಲಿದ್ದುವು. ಇವು ಹದಿಮೂರು - ಹದಿನಾಲ್ಕು ನೂರು ವರ್ಷಗಳ ಕಾಲ ದಾಖಲಾಗದೆ ಉಳಿದಿದ್ದುವು. ಕ್ರಿ.ಶ. ಎರಡನೆಯ ಶತಮಾನದ ಕೊನೆ ಮತ್ತು ಮೂರನೆಯ ಶತಮಾನದ ಆದಿ ಭಾಗದಲ್ಲಿ 'ರಬ್ಬಿ ಯಹೂದ ಇಬ್ನ್ ಶಮ್‌ಊನ್' ಎಂಬವರು ಇದಕ್ಕೆ 'ಮಿಶ್ನಾಹ್' (Mishnah) ಎಂಬ ಹೆಸರಿನೊಂದಿಗೆ ಲಿಖಿತರೂಪ ಕೊಟ್ಟರು. ಇದರ ವ್ಯಾಖ್ಯಾನವನ್ನು

ಫೆಲೆಸ್ತೀನ್ ವಿದ್ವಾಂಸರು 'ಹಲಾಕಃ'(Halakah) ಎಂಬ ಹೆಸರಿನಿಂದ ಮತ್ತು ಬ್ಯಾಬಿಲೋನಿಯಾದ ವಿದ್ವಾಂಸರು 'ಹಗ್ಗಡಾ'(Haggadah) ಎಂಬ ಹೆಸರಿನಿಂದ ಕ್ರಿ.ಶ. 3 ಮತ್ತು 5ನೆಯ ಶತಮಾನದಲ್ಲಿ ಬರೆದರು. ಈ ಗ್ರಂಥಗಳ ಸಂಕಲನವನ್ನೇ 'ತಲ್ಮೂದ್' ಎಂದು ಕರೆಯಲಾಗುತ್ತದೆ. ಅವರ ಪರಂಪರೆ ಯಾರ ಮೂಲಕ ಯಾರ ತನಕ ತಲುಪಿತು ಎಂದು ತಿಳಿಯಲು ಯಾವುದಕ್ಕೂ ಆಧಾರ ಪ್ರಮಾಣಗಳು ಲಭ್ಯವಿಲ್ಲ.

## ಪ್ರವಾದಿ ಏಸುಕ್ರಿಸ್ತ ಮತ್ತು ಕ್ರೈಸ್ತ ಗ್ರಂಥಗಳ ಅವಸ್ಥೆ

ಹ. ಈಸಾ(ಏಸುಕ್ರಿಸ್ತ)ರ ಜೀವನ ಚರ್ಯೆ ಮತ್ತು ಬೋಧನೆಗಳ ಅವಸ್ಥೆಯೂ ಇದುವೇ ಆಗಿದೆ. ದೇವನ ವತಿಯಿಂದ ಅವತೀರ್ಣಗೊಂಡಿದ್ದ ನೈಜ ಇಂಜೀಲನ್ನು ಅವರು ಬಾಯ್ದೆರೆಯಾಗಿಯೇ ಜನರಿಗೆ ತಿಳಿಸಿದ್ದರು. ಅವರ ಶಿಷ್ಯಂದಿರೂ ಅವರ ಸ್ಥಿತಿಗತಿ ಮತ್ತು ಇಂಜೀಲ್‌ನ ಸೂಕ್ತಗಳನ್ನೆಲ್ಲಾ ಕಲಸುಮೇಲೋಗರ ಮಾಡಿ ಬಾಯ್ದೆರೆಯಾಗಿಯೇ ಇತರರಿಗೆ ತಲುಪಿಸಿದರು. ಆ ಪೈಕಿ ಯಾವುದನ್ನೂ ಹ. ಈಸಾರ(ಅ) ಕಾಲದಲ್ಲಿ ಅಥವಾ ಅದರ ನಂತರ ಬರೆಯಲಾಗಲಿಲ್ಲ. ಗ್ರೀಕ್ ಭಾಷೆ ಮಾತನಾಡುವ ಕ್ರೈಸ್ತರು ಅದನ್ನು ಬರೆದು ದಾಖಲಿಸುವ ಕೆಲಸವನ್ನು ಮಾಡಿದರು. ಹ.ಈಸಾರ(ಅ) ಭಾಷೆ 'ಸೀರಿಯನ್' (Syrian) ಅಥವಾ ಅರಮೇಯಿಕ್(Aramaic) ಆಗಿತ್ತು. ಅವರ ಶಿಷ್ಯಂದಿರು ಈ ಭಾಷೆಯನ್ನೇ ಆಡುತ್ತಿದ್ದರು. ಗ್ರೀಕ್ ಭಾಷೆಯ ಅನೇಕ ಲೇಖಕರು ಅದನ್ನು ಅರಮೇಯಿಕ್ ಭಾಷೆಯಲ್ಲಿ ಕೇಳಿ ಗ್ರೀಕ್‌ನಲ್ಲಿ ಬರೆದರು. ಈ ಲೇಖಕರ ಕೃತಿಗಳ ಪೈಕಿ ಯಾವುದೂ ಕ್ರಿ.ಶ. 70ಕ್ಕಿಂತ ಮೊದಲಿನದ್ದಲ್ಲ. ಹ.ಈಸಾರ(ಅ) ಯಾವುದೇ ಮಾತನ್ನು ಅವರು, ಯಾರಿಂದ ಕೇಳಿದ್ದರು ಎಂದು ತಿಳಿಯುವಂತಾಗಲು ಅವರ ಪೈಕಿ ಯಾರೂ ಹ.ಈಸಾರ(ಅ) ಯಾವುದೇ ಘಟನೆ ಅಥವಾ ಯಾವುದೇ ಹೇಳಿಕೆಗೆ ಆಧಾರ ಪ್ರಮಾಣಗಳನ್ನು ನೀಡಿಲ್ಲ. ಅಲ್ಲದೆ ಅವರು ಬರೆದ ಗ್ರಂಥಗಳೂ ಸುರಕ್ಷಿತವಾಗಿ ಉಳಿದಿಲ್ಲ. ಬೈಬಲ್‌ನ ಹೊಸ ಒಡಂಬಡಿಕೆ(New Testament)ಯ ಸಹಸ್ರಾರು ಪ್ರತಿಗಳನ್ನು ಸಂಗ್ರಹಿಸಲಾಯಿತಾದರೂ ಆ ಪೈಕಿ ಯಾವುದೂ ಕ್ರಿ.ಶ. 4ನೆಯ ಶತಮಾನಕ್ಕೆ ಮುಂಚಿನದ್ದಲ್ಲ. ಹೆಚ್ಚಿನವು ಹನ್ನೊಂದರಿಂದ ಹದಿನಾಲ್ಕನೆಯ ಶತಮಾನದ ವರೆಗಿನದ್ದಾಗಿವೆ. ಈಜಿಪ್ಟ್ ಮತ್ತು ಪ್ಯಾರಿಸ್‌ನಲ್ಲಿ ಸಿಕ್ಕಿರುವ ಛಿದ್ರ ಭಾಗಗಳ ಪೈಕಿ ಯಾವುದೂ 3ನೆಯ ಶತಮಾನಕ್ಕಿಂತ ಹಿಂದಿನದ್ದಲ್ಲ. ಇದನ್ನು ಗ್ರೀಕ್ ಭಾಷೆಯಿಂದ ಲ್ಯಾಟಿನ್ ಭಾಷೆಗೆ ಯಾರು ಯಾವಾಗ ತರ್ಜುಮೆ ಮಾಡಿದರು ಎಂಬ ಬಗ್ಗೆ ಯಾವುದೇ

ವಿವರಗಳಿಲ್ಲ. ನಾಲ್ಕನೆಯ ಶತಮಾನದಲ್ಲಿ ಪೋಪರ ಆಜ್ಞೆಯ ಮೇರೆಗೆ ಅದನ್ನು ಮರು ಪರಿಶೀಲಿಸಲಾಯಿತು ಮತ್ತು 16ನೆಯ ಶತಮಾನದಲ್ಲಿ ಅದನ್ನು ಬಿಟ್ಟು ಗ್ರೀಕ್‌ನಿಂದ ಲ್ಯಾಟಿನ್ ಭಾಷೆಗೆ ಹೊಸತಾಗಿ ತರ್ಜುಮೆ ಮಾಡಲಾಯಿತು. ನಾಲ್ಕೂ ಇಂಜೀಲ್ ಗಳನ್ನು ಪ್ರಾಯಶಃ ಎರಡನೆಯ ಶತಮಾನದಲ್ಲಿ ಗ್ರೀಕ್‌ನಿಂದ ಸಿರಿಯನ್ ಭಾಷೆಗೆ ಅನುವಾದಿಸಲಾಯಿತು. ಆದರೆ ಈಗ ಲಭ್ಯವಿರುವ ಅದರ ಪ್ರಾಚೀನ ಪ್ರತಿಯೂ ನಾಲ್ಕನೆಯ ಶತಮಾನದಲ್ಲಿ ಬರೆದುದಾಗಿದೆ. ಐದನೆಯ ಶತಮಾನದಲ್ಲಿ ಸಿಕ್ಕ ಲಿಖಿತ ಪ್ರತಿ ಅದಕ್ಕಿಂತ ತೀರಾ ಭಿನ್ನವಾಗಿದೆ. ಸಿರಿಯನ್‌ನಿಂದ ಅರಬಿ ಭಾಷೆಗೆ ಮಾಡಲಾದ ತರ್ಜುಮೆಯಲ್ಲಿಯೂ ಯಾವುದೂ ಎಂಟನೆಯ ಶತಮಾನಕ್ಕಿಂತ ಹಿಂದಿನದ್ದಲ್ಲ. ವಿಚಿತ್ರವೆಂದರೆ ಸುಮಾರು ಎಪ್ಪತ್ತು ಇಂಜೀಲ್‌ಗಳನ್ನು ಬರೆಯಲಾಗಿದ್ದು ಆ ಪೈಕಿ ಕೇವಲ ನಾಲ್ಕನ್ನು ಕ್ರೈಸ್ತ ಧಾರ್ಮಿಕ ನಾಯಕರು ಸ್ವೀಕರಿಸಿದ್ದು ಉಳಿದುದನ್ನು ತಿರಸ್ಕರಿಸಿದ್ದಾರೆ. ಸ್ವೀಕರಿಸಲಿಕ್ಕಾಗಲೀ ತಿರಸ್ಕರಿಸಲಿಕ್ಕಾಗಲೀ ಕಾರಣವೇನೆಂದು ತಿಳಿದಿಲ್ಲ. ಈ ವಿವರಗಳ ಆಧಾರದಲ್ಲಿ ಹ. ಈಸಾರ(ಅ) ಜೀವನಚರ್ಯೆ ಮತ್ತು ಬೋಧನೆಗಳನ್ನು ಯಾವ ಮಟ್ಟದಲ್ಲಾದರೂ ಅಧಿಕೃತವೆಂದು ಒಪ್ಪಲು ಸಾಧ್ಯವೇ?

ಇತರ ಧಾರ್ಮಿಕ ನಾಯಕರುಗಳ ವಿಷಯವೂ ಇದಕ್ಕಿಂತ ಭಿನ್ನವಲ್ಲ. ಉದಾಹರಣೆಗೆ ಝುರತುಷ್ಟ್ರರನ್ನೇ(Zoroaster) ತೆಗೆದುಕೊಳ್ಳಿ. ಅವರ ಜನನ ಕಾಲ ನಿಖರವಾಗಿ ತಿಳಿದಿಲ್ಲ. ಹೆಚ್ಚೆಂದರೆ ಅಲೆಗ್ಸಾಂಡರ್ ಇರಾನನ್ನು ಜಯಿಸುವುದಕ್ಕಿಂತ ಇನ್ನೂರೈವತ್ತು ವರ್ಷ ಮೊದಲು ಅವರು ಅಸ್ತಿತ್ವದಲ್ಲಿದ್ದರೆಂದು ಮಾತ್ರ ಹೇಳ ಲಾಗಿದೆ. ಅಂದರೆ ಏಸುಕ್ರಿಸ್ತರಿಗಿಂತ ಐನೂರ ಐವತ್ತು ವರ್ಷಗಳ ಹಿಂದೆ. ಅವರ ಗ್ರಂಥ ಝುಂಡಾವೆಸ್ತಾ ಅದರ ಮೂಲ ಭಾಷೆಯಲ್ಲಿ ಇಂದು ಲಭ್ಯವಿಲ್ಲ. ಅದು ಯಾವ ಭಾಷೆಯಲ್ಲಿ ಬರೆಯಲ್ಪಟ್ಟಿತೋ ಅಥವಾ ಬಾಯ್ಮಾತಿನ ಮೂಲಕ ವಿವರಿಸ ಲ್ಪಟ್ಟಿತೋ ಆ ಭಾಷೆಯೂ ಈಗ ಕೃಶವಾಗಿದೆ. ಕ್ರಿ.ಶ. ಒಂಭತ್ತನೆಯ ಶತಮಾನದಲ್ಲಿ ಅದರ ಕೆಲವು ಭಾಗಗಳನ್ನು ವ್ಯಾಖ್ಯಾನ ಸಹಿತ ಒಂಬತ್ತು ಸಂಪುಟಗಳಲ್ಲಿ ಅನುವಾದಿಸಲಾಗಿತ್ತು. ಆದರೆ ಅದರ ಮೊದಲಿನ ಎರಡು ಸಂಪುಟಗಳು ನಾಶ ವಾದವು. ಈಗ ಲಭ್ಯವಿರುವ ಅದರ ಪ್ರಾಚೀನ ಪ್ರತಿ ಹದಿಮೂರನೆಯ ಶತಮಾನದ ಮಧ್ಯ ಭಾಗದಲ್ಲಿ ಬರೆದುದಾಗಿದೆ. ಇದು ಝುರತುಷ್ಟ್ರರು ಸಮರ್ಪಿಸಿದ ಗ್ರಂಥದ ಅವಸ್ಥೆಯಾಯಿತು. ಇನ್ನು ಅವನ ಜೀವನ ಚರ್ಯೆಯ ಬಗ್ಗೆ ಹೇಳುವುದಾದರೆ,

40ನೆಯ ವರ್ಷದಲ್ಲಿ ಅವರು ಧರ್ಮ ಪ್ರಚಾರವನ್ನು ಆರಂಭಿಸಿದರು. ಎರಡು ವರ್ಷಗಳ ನಂತರ ರಾಜ ಗುಷ್ತಾಫ್(King Gustaph) ಅವರ ಅನುಚರನಾದನು. ತರುವಾಯ ಅವರ ಧರ್ಮ ಅಧಿಕೃತ ಧರ್ಮವಾಗಿ ಮಾರ್ಪಟ್ಟಿತು. ಎಪ್ಪತ್ತೇಳು ವರ್ಷಗಳ ಕಾಲ ಅವರು ಜೀವಿಸಿದ್ದರು. ಅವರು ನಿಧನರಾಗಿ ಕಾಲ ಗತಿಸುತ್ತಾ ಹೋದಂತೆಯೇ ಅವರ ಜೀವನದ ಯಾವ ಐತಿಹಾಸಿಕ ಹಿನ್ನಲೆಯೂ ಇಲ್ಲದ ಅನೇಕ ಬಗೆಯ ಚಿತ್ರ ವಿಚಿತ್ರ ಕಟ್ಟುಕತೆಗಳ ಸಂಕಲನವಾಗುತ್ತಾ ಹೋಯಿತು ಎಂಬುದಕ್ಕಿಂತ ಹೆಚ್ಚೇನೂ ನಮಗೆ ತಿಳಿದಿಲ್ಲ.

ಜಗತ್ತಿನ ಸುಪ್ರಸಿದ್ಧ ಧಾರ್ಮಿಕ ವ್ಯಕ್ತಿಗಳಲ್ಲಿ ಗೌತಮ ಬುದ್ಧರೂ ಒಬ್ಬರು. ಝುರತುಷ್ಟ್ರರಂತೆ ಅವರ ಬಗ್ಗೆಯೂ ಅವರು ಪ್ರವಾದಿಯಾಗಿರಲೂಬಹುದು ಎಂದು ಭಾವಿಸಲಾಗುತ್ತದೆ. ಆದರೆ ಯಾವುದೇ ಗ್ರಂಥವನ್ನು ಅವರು ಸಮರ್ಪಿಸಿರಲಿಲ್ಲ. ಅವರ ಹಿಂಬಾಲಕರು ಅವರು ಯಾವುದೇ ಗ್ರಂಥವನ್ನು ತಂದಿದ್ದರು ಎಂದು ವಾದಿಸಲಿಲ್ಲ. ಅವರು ನಿಧನರಾಗಿ ನೂರು ವರ್ಷ ಕಳೆದ ನಂತರ ಅವರ ಹೇಳಿಕೆ ಮತ್ತು ಸ್ಥಿತಿಗತಿಗಳನ್ನು ಸಂಗ್ರಹಿಸುವ ಸರಣಿ ಆರಂಭವಾಯಿತು ಮತ್ತು ಅದು ಶತಮಾನಗಳ ಕಾಲ ನಡೆಯುತ್ತಾ ಇತ್ತು. ಆದರೆ ಬೌದ್ಧ ಧರ್ಮದ ಮೂಲ ಗ್ರಂಥಗಳೆಂದು ಭಾವಿಸಲಾಗುವ ಗ್ರಂಥಗಳ ಪೈಕಿ ಯಾವುದರಲ್ಲೂ ಅದನ್ನು ಕ್ರೋಢೀಕರಿಸಿದವರಿಗೆ ಯಾವ ಮೂಲದಿಂದ ಬುದ್ಧನ ಜೀವನದ ಸ್ಥಿತಿಗತಿ ಮತ್ತು ಅವರ ಹೇಳಿಕೆಗಳು ದೊರೆತವು ಎಂಬ ಯಾವುದೇ ಆಧಾರ ಪ್ರಮಾಣಗಳು ಉಲ್ಲೇಖಿಸಲ್ಪಟ್ಟಿಲ್ಲ.

ಇದರಿಂದ ತಿಳಿದು ಬರುವುದೇನೆಂದರೆ ಒಂದು ವೇಳೆ ನಾವು ಇತರ ಪ್ರವಾದಿಗಳು ಮತ್ತು ಧಾರ್ಮಿಕ ನಾಯಕರುಗಳೆಡೆಗೆ ತಿರುಗಿದರೂ - ಅವರ ಜೀವನ ಮತ್ತು ಬೋಧನೆಗಳಿಂದ ಚಿತ್ತ ಸಮಾಧಾನ ಮತ್ತು ಆತ್ಮವಿಶ್ವಾಸದೊಂದಿಗೆ ಮಾರ್ಗದರ್ಶನ ಪಡೆಯಲು ಯಾವುದೇ ಅಧಿಕೃತ ಮೂಲಗಳು ಲಭ್ಯವಿಲ್ಲ. ಅಂತಹ ಸಂದರ್ಭದಲ್ಲಿ ನಾವು ಮಾರ್ಗದರ್ಶನವನ್ನು ಪಡೆಯಬೇಕಾದರೆ, ತಿದ್ದುಪಡಿ ಮತ್ತು ಸೇರ್ಪಡೆಯಿಂದ ಸಂಪೂರ್ಣ ಮುಕ್ತವಾದ ನಂಬಲರ್ಹ ಗ್ರಂಥವನ್ನು ತನ್ನ ಹಿಂದೆ ಬಿಟ್ಟಿರುವ ಪ್ರವಾದಿಯನ್ನು ಅನುಸರಿಸಬೇಕಾಗುತ್ತದೆ. ಅವರ ಜೀವನದ ಸಮಸ್ತ ಸ್ಥಿತಿಗತಿ ಮತ್ತು ನಡೆ-ನುಡಿಗಳು ವಿಶ್ವಸ್ಥ ಮೂಲದಿಂದ ನಮಗೆ ತಲುಪಿರಬೇಕು. ಸಮಸ್ತ ಜಾಗತಿಕ ಚರಿತ್ರೆಯಲ್ಲಿ ಸಚ್ಚರಿತ ವ್ಯಕ್ತಿತ್ವದ ಮುಹಮ್ಮದ್

ರವರು(ಸ) ಮಾತ್ರ ಅಂತಹ ವ್ಯಕ್ತಿಯಾಗಿದ್ದಾರೆ.

ಅವರು ಒಂದು ಗ್ರಂಥವನ್ನು (ಪವಿತ್ರ ಕುರ್‌ಆನ್), ಇದು ನನ್ನ ಮೇಲೆ ಅವತೀರ್ಣಗೊಂಡ ದೇವವಚನಗಳು ಎಂಬ ಸ್ಪಷ್ಟೋಕ್ತಿಯೊಂದಿಗೆ ಸಮರ್ಪಿಸಿದರು. ಆ ಗ್ರಂಥವನ್ನು ಅವಲೋಕಿಸಿ ನೋಡಿದರೆ ಅದರಲ್ಲಿ ಯಾವುದೇ ಸೇರ್ಪಡೆಯಾಗಿಲ್ಲ ಎಂದು ನಮಗೆ ಖಾತ್ರಿಯಾಗುತ್ತದೆ. ಸ್ವತಃ ಪ್ರವಾದಿವರ್ಯರ(ಸ) ಯಾವುದೇ ವಚನವೂ ಅದರಲ್ಲಿ ಸೇರಿಲ್ಲ. ಬದಲಾಗಿ ಅವರ ವಚನಗಳನ್ನು ಪ್ರತ್ಯೇಕವಾಗಿ ಇಡಲಾಗಿದೆ. ಬೈಬಲ್‌ನಂತೆ ಅವರ ಜೀವನದ ಸ್ಥಿತಿಗತಿ, ಅರಬರ ಇತಿಹಾಸ ಮತ್ತು ಪವಿತ್ರ ಕುರ್‌ಆನ್ ಅವತೀರ್ಣಗೊಂಡ ಕಾಲದ ಘಟನಾವಳಿಗಳನ್ನು ಆ ದೇವ ವಚನದಲ್ಲಿ ಮಿಶ್ರಗೊಳಿಸ ಲಾಗಿಲ್ಲ. ಇದು ಅಪ್ಪಟ ದೈವಿಕ ವಚನಗಳು (Word of God). ಅಲ್ಲಾಹನ ಹೊರತು ಅನ್ಯರ ಒಂದು ಪದವೂ ಅದರಲ್ಲಿ ಸೇರಿಲ್ಲ. ಅದರ ಪದಗಳ ಪೈಕಿ ಒಂದು ಪದವೂ ಕಡಿತಗೊಂಡಿಲ್ಲ. ಪ್ರವಾದಿಯವರ(ಸ) ಕಾಲದಿಂದ ಯಥಾಸ್ಥಿತಿಯಲ್ಲಿ ಅದು ನಮ್ಮ ಕಾಲಕ್ಕೆ ವರ್ಗಾವಣೆಯಾಗಿದೆ.

ಈ ಗ್ರಂಥ ಪ್ರವಾದಿಯವರ(ಸ) ಮೇಲೆ ಅವತೀರ್ಣಗೊಳ್ಳಲಾರಂಭವಾದಂದಿನಿಂದಲೇ ಅವರು ಅದನ್ನು ಬರೆಸಲಾರಂಭಿಸಿದರು. ಯಾವುದಾದರೂ ದೇವವಾಣಿ ಅವತೀರ್ಣಗೊಂಡ ತಕ್ಷಣ ಅವರು ತಮ್ಮ ಬರಹಗಾರರನ್ನು ಕರೆಸಿ ಅದನ್ನು ಬರೆಸಿ ಬಿಡುತ್ತಿದ್ದರು. ಬರೆದಾದನಂತರ ಬರಹಗಾರನು ಅವರಿಗೆ ಅದನ್ನು ಓದಿ ಕೇಳಿಸುತ್ತಿದ್ದನು. ಬರಹಗಾರ ಸರಿಯಾಗಿಯೇ ಬರೆದಿದ್ದಾನೆ ಎಂದು ಸಮಾಧಾನವಾದ ನಂತರ ಅವರು ಅದನ್ನು ಒಂದು ಸುರಕ್ಷಿತ ಸ್ಥಳದಲ್ಲಿ ಇರಿಸುತ್ತಿದ್ದರು. ಅವತೀರ್ಣಗೊಂಡ ಪ್ರತಿಯೊಂದು ದೇವವಾಣಿಯ ಬಗ್ಗೆ ಅದನ್ನು ಯಾವ ಅಧ್ಯಾಯದ ಯಾವ ಸೂಕ್ತದ ನಂತರ ಅಥವಾ ಮೊದಲು ದಾಖಲಿಸಬೇಕು ಎಂಬ ಕುರಿತೂ ಅವರು ಬರಹಗಾರನಿಗೆ ನಿರ್ದೇಶಿಸುತ್ತಿದ್ದರು. ಹೀಗೆ ಅದು ಪೂರ್ಣಗೊಳ್ಳುವ ತನಕ ಅವರು ಅದನ್ನು ಕ್ರಮಬದ್ಧವಾಗಿ ಕ್ರೋಡೀಕರಿಸುತ್ತಲೂ ಇದ್ದರು.

ಇಸ್ಲಾಮಿನ ಆರಂಭದಿಂದಲೇ ನಮಾಝಿನಲ್ಲಿ ಪವಿತ್ರ ಕುರ್‌ಆನನ್ನು ಓದಬೇಕೆಂಬ ಆದೇಶವಿತ್ತು. ಆದ್ದರಿಂದ ಪ್ರವಾದಿ ಸಂಗಾತಿಗಳು ಕುರ್‌ಆನ್ ಅವತೀರ್ಣಗೊಂಡಂತೆಯೇ ಅದನ್ನು ಕಂಠಪಾಠ ಮಾಡಿಕೊಳ್ಳುತ್ತಿದ್ದರು. ಅನೇಕರು

ಅದನ್ನು ಪೂರ್ತಿ ಕಂಠಪಾಠ ಮಾಡಿಕೊಂಡರು. ಪ್ರವಾದಿಯವರ(ಸ) ಅನುಚರರ ಪೈಕಿ ಹೆಚ್ಚಿನವರು ಅದರ ಬೇರೆ ಬೇರೆ ಭಾಗಗಳನ್ನು ಕಂಠಪಾಠ ಮಾಡಿ ಅದನ್ನು ಸ್ಮೃತಿ ಪಟಲದಲ್ಲಿ ಸುರಕ್ಷಿತವಾಗಿರಿಸಿದ್ದರು. ಅಲ್ಲದೆ ಸುಶಿಕ್ಷಿತರಾದ ಅನೇಕ ಅನುಚರರು ಪವಿತ್ರ ಕುರ್‌ಆನಿನ ವಿವಿಧ ಭಾಗಗಳನ್ನು ತಾವಾಗಿಯೇ ಬರೆದಿಟ್ಟುಕೊಳ್ಳುತ್ತಿದ್ದರು. ಹೀಗೆ ಪ್ರವಾದಿಯವರ(ಸ) ಪಾವನ ಜೀವಿತ ಕಾಲದಲ್ಲೇ ನಾಲ್ಕು ರೀತಿಯಲ್ಲಿ ಪವಿತ್ರ ಕುರ್‌ಆನ್ ಸುರಕ್ಷಿತವಾಗಿ ಉಳಿದಿತ್ತು:

1. ಅವರು ಸ್ವತಃ ಅದನ್ನು ಬರಹಗಾರರ ಮೂಲಕ ಆದಿಯಿಂದ ಅಂತ್ಯದ ತನಕ ಬರೆಸಿದರು.
2. ಅನೇಕ ಸಹಾಬಿಗಳು(ರ) ಕುರ್‌ಆನನ್ನು ಸಂಪೂರ್ಣ ಕಂಠಪಾಠ ಮಾಡಿದ್ದರು.
3. ಕುರ್‌ಆನಿನ ಯಾವುದಾದರೂ ಕೆಲವು ಭಾಗವನ್ನು ಕಂಠಪಾಠ ಮಾಡದ ಸಹಾಬಿಗಳು(ರ) ಯಾರೂ ಇರಲಿಲ್ಲ. ಏಕೆಂದರೆ ನಮಾಝ್‌ನಲ್ಲಿ ಅದನ್ನು ಅವರು ಓದಬೇಕಾಗಿತ್ತು. ಪ್ರವಾದಿಯವರ(ಸ) ಜೊತೆಗೆ ಅವರ ವಿದಾಯ ಹಜ್ಜ್‌ನಲ್ಲಿ ಒಂದು ಲಕ್ಷ ನಲವತ್ತು ಸಾವಿರ ಸಹಾಬಿಗಳು(ರ) ಪಾಲ್ಗೊಂಡಿದ್ದರು. ಇದರಿಂದ ಸಹಾಬಿಗಳ ಸಂಖ್ಯೆಯನ್ನು ಅಂದಾಜಿಸ ಬಹುದಾಗಿದೆ.
4. ಸುಶಿಕ್ಷಿತ ಸಹಾಬಿಗಳ ಒಂದು ದೊಡ್ಡ ವರ್ಗ ಪವಿತ್ರ ಕುರ್‌ಆನನ್ನು ಸ್ವತಃ ಬರೆದಿಟ್ಟುಕೊಂಡಿದ್ದಲ್ಲದೆ, ಪ್ರವಾದಿಯವರಿಗೆ(ಸ) ಅದನ್ನು ಓದಿ ಕೇಳಿಸಿ ಅದರ ಅಧಿಕೃತತೆಯ ಬಗ್ಗೆ ಖಾತ್ರಿ ಮಾಡಿಕೊಂಡಿದ್ದರು.

ಇಂದು ನಮ್ಮ ಬಳಿ ಇರುವ ಪವಿತ್ರ ಕುರ್‌ಆನ್ ಪ್ರವಾದಿಯವರು(ಸ) ದೇವನ ವಚನವೆಂದು ಸಮರ್ಪಿಸಿದ ಅದೇ ಕುರ್‌ಆನ್ ಆಗಿದೆ ಎಂಬುದು ನಿರಾಕರಿಸಲಾಗದ ಸತ್ಯ. ಪ್ರವಾದಿಯ(ಸ) ನಿಧನಾನಂತರ ಅವರ ಮೊದಲ ಖಲೀಫಾ ಹ. ಅಬೂಬಕರ್ ಸಿದ್ದೀಕ್(ರ) ಅವರು ಕುರ್‌ಆನ್ ಕಂಠಪಾಠ ಮಾಡಿರುವ 'ಹಾಫಿಝ್'ಗಳೆಲ್ಲರ ಮತ್ತು ಎಲ್ಲಾ ಲಿಖಿತ ದಾಖಲೆಗಳ ಸಹಾಯದಿಂದ ಅದಕ್ಕೆ ಒಂದು ಸಮಗ್ರ ಗ್ರಂಥದ ರೂಪ ಕೊಟ್ಟರು. ಹ. ಉಸ್ಮಾನ್‌ರವರ(ರ) ಕಾಲದಲ್ಲಿ ಇದರ ಪ್ರತಿಗಳನ್ನು ಸರ್ಕಾರದ

ಮೂಲಕ ಇಸ್ಲಾಮೀ ಜಗತ್ತಿನ ಕೇಂದ್ರ ಸ್ಥಾನಗಳಿಗೆ ಕಳುಹಿಸಲಾಯಿತು. ಆ ಪೈಕಿ ಎರಡು ಪ್ರತಿಗಳು ಈಗಲೂ ಜಗತ್ತಿನಲ್ಲಿ ಅಸ್ತಿತ್ವದಲ್ಲಿವೆ. ಒಂದು ಇಸ್ತಾಂಬೂಲ್‌ನಲ್ಲಿದ್ದರೆ ಮತ್ತೊಂದು ತಾಷ್ಕೆಂಟ್‌ನಲ್ಲಿದೆ.

ಯಾರಾದರೂ ಇಚ್ಛಿಸುವುದಾದರೆ ಕುರ್‌ಆನಿನ ಯಾವುದಾದರೂ ಪ್ರಕಟಿತ ಪ್ರತಿಯನ್ನು ತೆಗೆದುಕೊಂಡು ಹೋಗಿ ಅದರೊಂದಿಗೆ ಹೋಲಿಸಬಹುದು. ಅದರಲ್ಲಿ ಅವನಿಗೆ ಯಾವ ಭಿನ್ನತೆಯೂ ಕಾಣದು. ಪ್ರವಾದಿಯವರ(ಸ) ಕಾಲದಿಂದ ಹಿಡಿದು ಈಗಿನ ತನಕ ಆಗಿ ಹೋದ ಎಲ್ಲಾ ಪೀಳಿಗೆಯಲ್ಲಿ ಲಕ್ಷಗಟ್ಟಲೆ ಹಾಫಿಝ್‌ಗಳು ಗತಿಸಿ ಹೋಗಿರುವಾಗ ಭಿನ್ನತೆ ಇರುವುದಾದರೂ ಹೇಗೆ? ಅದರ ಒಂದು ಪದವನ್ನಾದರೂ ಯಾರಾದರೂ ಬದಲಿಸಿದರೆ ಕುರ್‌ಆನ್ ಕಂಠಪಾಠ ಮಾಡಿರುವವರು ಕೂಡಲೇ ಆ ತಪ್ಪನ್ನು ಗ್ರಹಿಸುತ್ತಾರೆ. ಕಳೆದ ಶತಮಾನದ ಅಂತ್ಯಭಾಗದಲ್ಲಿ ಜರ್ಮನಿಯ 'ಮೂನಿಚ್ ವಿಶ್ವವಿದ್ಯಾಲಯ' (Munich University)ದ ಒಂದು ಸಂಸ್ಥೆಯು ಜಗತ್ತಿನ ವಿವಿಧೆಡೆಗಳಿಂದ ಪವಿತ್ರ ಕುರ್‌ಆನಿನ ಲಿಖಿತ ಮತ್ತು ಅಚ್ಚಾದ ನಲವತ್ತೆರಡು ಸಾವಿರ ಪ್ರತಿಗಳನ್ನು ಸಂಗ್ರಹಿಸಿತ್ತು. ಐವತ್ತು ವರ್ಷಗಳ ತನಕ ಅದರ ಬಗ್ಗೆ ಸಂಶೋಧನೆ ನಡೆಸಿ ಕೊನೆಗೆ ಸಮರ್ಪಿಸಲಾದ ವರದಿಯಲ್ಲಿ ಆ ಪ್ರತಿಗಳಲ್ಲಿ ಬರಹದ ದೋಷ ಗಳನ್ನು ಬಿಟ್ಟರೆ ಬೇರೆ ಯಾವುದೇ ವ್ಯತ್ಯಾಸವಿಲ್ಲವೆಂದು ಹೇಳಲಾಯಿತು. ಇವು ಪ್ರಥಮ ಹಿಜರಿ ಶಕೆಯಿಂದ ಹಿಜರಿ ಶಕೆ ಹದಿನಾಲ್ಕರ ವರೆಗಿನ ಜಗತ್ತಿನ ನಾನಾ ಕಡೆಗಳಿಂದ ಸಂಗ್ರಹಿಸಲ್ಪಟ್ಟಿದ್ದ ಪ್ರತಿಗಳಾಗಿದ್ದುವು. ಎರಡನೆಯ ಮಹಾಯುದ್ಧದಲ್ಲಿ ಜರ್ಮನಿಯ ಮೇಲೆ ಬಾಂಬ್ ಸ್ಫೋಟವಾದಾಗ ಆ ಸಂಸ್ಥೆ ದುರ್ದೈವದಿಂದ ಮಣ್ಣು ಮುಕ್ಕಿತಾದರೂ ಅದು ನಡೆಸಿದ ಸಂಶೋಧನೆಗಳ ಫಲಿತಾಂಶ ನಾಶವಾಗಲಿಲ್ಲ.

ಅಲ್ಲದೆ ಪವಿತ್ರ ಕುರ್‌ಆನಿಗೆ ಸಂಬಂಧಿಸಿದಂತೆ ನೀವು ಗಮನದಲ್ಲಿರಿಸಬೇಕಾದ ಮತ್ತೊಂದು ವಿಷಯವೆಂದರೆ ಅದು ಯಾವ ಭಾಷೆಯಲ್ಲಿ ಅವತೀರ್ಣಗೊಂಡಿತೋ ಅದೊಂದು ಜೀವಂತ ಭಾಷೆಯಾಗಿದೆ. ಇರಾಕ್‌ನಿಂದ ಮೊರೊಕ್ಕೋದ ತನಕ ವ್ಯಾಪಿಸಿರುವ ಸುಮಾರು ಹನ್ನೆರಡು ಕೋಟಿ ಮನುಷ್ಯರು ಅದನ್ನು ಮಾತೃಭಾಷೆಯಾಗಿ ಹೊಂದಿದ್ದಾರೆ ಮತ್ತು ಅರಬೇತರ ಜಗತ್ತಿನಲ್ಲಿಯೂ ಲಕ್ಷಾಂತರ ಮಂದಿ ಅದನ್ನು ಓದುತ್ತಾರೆ ಹಾಗೂ ಓದಿಸುತ್ತಾರೆ. ಅರಬಿ ವ್ಯಾಕರಣ, ಅದರ ಅರ್ಥಕೋಶ, ಅದರ

ಪದಗಳ ಉಚ್ಚಾರ ಮತ್ತು ಅದರ ನುಡಿಗಟ್ಟುಗಳು ಹದಿನಾಲ್ಕು ನೂರು ವರ್ಷಗಳಿಂದಲೂ ಯಥಾಸ್ಥಿತಿಯಲ್ಲಿವೆ. ಹದಿನಾಲ್ಕು ನೂರು ವರ್ಷಗಳ ಹಿಂದೆ ಅದನ್ನು ಓದಿ ಅರ್ಥೈಸುತ್ತಿದ್ದಂತೆಯೇ ಇಂದಿನ ಅರಬಿ ಬಲ್ಲವರೂ ಅದನ್ನು ಓದಿ ಅರ್ಥೈಸಿಕೊಳ್ಳುತ್ತಾರೆ.

ಇದು ಮುಹಮ್ಮದ್‌ರನ್ನು(ಸ) ಬಿಟ್ಟು ಮತ್ತಾವ ಪ್ರವಾದಿಗಳಲ್ಲೂ ಅಥವಾ ಧಾರ್ಮಿಕ ನಾಯಕರುಗಳಲ್ಲೂ ಕಂಡುಬರದ ಒಂದು ಪ್ರಮುಖ ವೈಶಿಷ್ಟ್ಯವಾಗಿದೆ. ಅಲ್ಲಾಹನ ವತಿಯಿಂದ ಸಮಸ್ತ ಮಾನವರ ಮಾರ್ಗದರ್ಶನಕ್ಕಾಗಿ ಅವರ ಮೇಲೆ ಅವತೀರ್ಣಗೊಂಡಿದ್ದ ಗ್ರಂಥವೂ ಅದರ ಮೂಲ ಭಾಷೆಯಲ್ಲಿ ತನ್ನ ಮೂಲ ಪದಗಳೊಂದಿಗೆ ಯಾವುದೇ ಏರುಪೇರಿಲ್ಲದೆ ಅಸ್ತಿತ್ವದಲ್ಲಿದೆ.

## ಪ್ರವಾದಿಯವರ(ಸ) ಜೀವನಚರ್ಯೆಯ ಅಧಿಕೃತತೆ

ಪ್ರವಾದಿಯವರು(ಸ), ಇತರ ಪ್ರವಾದಿಗಳು ಮತ್ತು ಧಾರ್ಮಿಕ ನಾಯಕರುಗಳಲ್ಲಿ ಅನುಪಮವಾಗಿರುವ ಎರಡನೆಯ ವೈಶಿಷ್ಟ್ಯವನ್ನು ಈಗ ತೆಗೆದುಕೊಳ್ಳೋಣ. ಪ್ರವಾದಿ(ಸ) ತಂದ ಗ್ರಂಥದಂತೆ, ನಮ್ಮ ಜೀವನದ ಎಲ್ಲ ರಂಗಗಳಿಗೂ ಮಾರ್ಗದರ್ಶನವೀಯ ಬಲ್ಲ ಅವರ ಜೀವನ ಚರ್ಯೆಯೂ ಸುರಕ್ಷಿತವಾಗಿ ಉಳಿದಿದೆ. ಬಾಲ್ಯದಿಂದ ಕೊನೆಯುಸಿರಿನ ತನಕ ಅವರನ್ನು ಕಂಡ, ಅವರ ಜೀವನಾನುಭವಗಳನ್ನು ನೋಡಿದ, ಅವರ ಹೇಳಿಕೆಗಳನ್ನು ಕೇಳಿದ, ಅವರ ಭಾಷಣಗಳನ್ನು ಆಲಿಸಿದ, ಅವರು ಆದೇಶಿಸು ವುದನ್ನು ಅಥವಾ ತಡೆಯುವುದನ್ನು ಕೇಳಿದವರ ಪೈಕಿ ಒಂದು ದೊಡ್ಡ ಸಂಖ್ಯೆಯ ಜನರು ಅದನ್ನೆಲ್ಲಾ ನೆನಪಿಟ್ಟು ಅದನ್ನು ತಮ್ಮ ಮುಂದಿನ ಪೀಳಿಗೆಗೆ ತಲಪಿಸಿದರು. ಕೆಲವು ಸಂಶೋಧಕರ ಪ್ರಕಾರ ಕಣ್ಣಾರೆ ಕಂಡ ಮತ್ತು ಕಿವಿಯಾರೆ ಕೇಳಿದ ಘಟನೆ ಗಳನ್ನು ತಮ್ಮ ಮುಂದಿನ ಪೀಳಿಗೆಗೆ ವರ್ಗಾಯಿಸಿದ ಇಂತಹ ವ್ಯಕ್ತಿಗಳ ಸಂಖ್ಯೆ ಒಂದು ಲಕ್ಷಕ್ಕೆ ಸಮೀಪವಿದೆ. ಸ್ವತಃ ಪ್ರವಾದಿಯವರೇ(ಸ) ಬರೆಸಿದ ಆದೇಶಗಳು ಮತ್ತು ಜನರಿಗೆ ಕೊಟ್ಟ ಅಥವಾ ರವಾನಿಸಿದ ಆದೇಶಗಳು ಅನಂತರದ ಜನರಿಗೆ ಸಿಕ್ಕಿದವು. ಪ್ರವಾದಿ ಸಂಗಾತಿ ಗಳ ಪೈಕಿ ಕನಿಷ್ಠ ಆರು ಮಂದಿ ಅವರ ವಚನಗಳನ್ನು ಬರೆದು ತಪ್ಪು ಸಂಭವಿಸದಂತೆ ಅದನ್ನು ಪ್ರವಾದಿಯವರಿಗೆ(ಸ) ಕೇಳಿಸಿದ್ದರು. ಈ ಬರವಣಿಗೆಗಳೂ ಅವರಿಂದ ಅನಂತರದವರಿಗೆ ಸಿಕ್ಕಿದುವು. ಪ್ರವಾದಿಯವರ(ಸ)

ನಿಧನಾನಂತರ ಕನಿಷ್ಠ ಐವತ್ತು ಮಂದಿ ಅನುಚರರು ಅವರ ಸ್ಥಿತಿಗತಿ, ಘಟನಾವಳಿ ಮತ್ತು ಹೇಳಿಕೆಗಳನ್ನು ಲಿಖಿತ ರೂಪದಲ್ಲಿ ಸಂಗ್ರಹಿಸಿದರು. ಈ ಜ್ಞಾನ ಭಂಡಾರವೂ ಅನಂತರ ಹದೀಸ್ ಕ್ರೋಢೀಕರಣದ ಸೇವೆಯನ್ನು ಮಾಡಿದವರಿಗೆ ತಲುಪಿತು. ಈಗಾಗಲೇ ಹೇಳಿರುವಂತೆ ಪ್ರವಾದಿ ಜೀವನಚರ್ಯೆಯ ವಿವರಗಳನ್ನು ಬಾಯ್ದೆರೆಯಾಗಿ ಹೇಳಿದ ಪ್ರವಾದಿ ಸಂಗಾತಿಗಳ ಸಂಖ್ಯೆ ಕೆಲವು ಸಂಶೋಧಕರ ಪ್ರಕಾರ ಒಂದು ಲಕ್ಷಕ್ಕೆ ತಲುಪುತ್ತದೆ. ಇದು ಆಶ್ಚರ್ಯಕರ ಸಂಗತಿಯೇನಲ್ಲ. ಏಕೆಂದರೆ 'ಹಜ್ಜತುಲ್ ವಿದಾಅ್' ಎಂದು ಕರೆಯಲ್ಪಡುವ ಪ್ರವಾದಿಯವರು(ಸ) ನಿರ್ವಹಿಸಿದ ವಿದಾಯ ಹಜ್ಜ್‌ನಲ್ಲಿ ಅವರ ಜೊತೆ ಒಂದು ಲಕ್ಷ ನಲವತ್ತು ಸಾವಿರ ಜನರು ಉಪಸ್ಥಿತರಿದ್ದರು. ಇಷ್ಟು ಮಂದಿ ಅವರು ಹಜ್ಜ್ ನಿರ್ವಹಿಸುತ್ತಿರುವುದನ್ನು ವೀಕ್ಷಿಸಿದರು. ಅವರಿಂದ ಹಜ್ಜ್‌ನ ವಿಧಾನವನ್ನು ಕಲಿತರು ಮತ್ತು ವಿದಾಯ ಹಜ್ಜ್‌ನ ವೇಳೆ ಅವರು ಮಾಡಿದ ಭಾಷಣಗಳನ್ನು ಕೇಳಿದರು. ಹಜ್ಜ್‌ನ ವೇಳೆ ಒಂದು ಪ್ರಮುಖ ಸಂದರ್ಭದಲ್ಲಿ ಇಷ್ಟು ಮಂದಿ ಅವರ ಜೊತೆಗಿದ್ದು, ಅನಂತರ ಅವರು ತಮ್ಮ ತಮ್ಮ ಪ್ರದೇಶಕ್ಕೆ ಮರಳಿದಾಗ ಅವರ ಬಂಧು ಮಿತ್ರಾದಿ ಮತ್ತು ಸಹಜೀವಿಗಳು ಪ್ರಯಾಣದ ವಿವರ ಮತ್ತು ಹಜ್ಜ್‌ಕರ್ಮದ ವಿಧಿ ವಿಧಾನಗಳ ಬಗ್ಗೆ ಸ್ವಾಭಾವಿಕವಾಗಿಯೇ ವಿಚಾರಿಸುತ್ತಾರೆ. ಪ್ರವಾದಿಯಂತಹ(ಸ) ಉಜ್ವಲ ವ್ಯಕ್ತಿ ಈ ಲೋಕದಿಂದ ಹೊರಟುಹೋದ ಬಳಿಕ ಅವರನ್ನು ಕಂಡು ಮತ್ತು ಅವರ ನುಡಿಗಳನ್ನು ಆಲಿಸಿದ ವ್ಯಕ್ತಿಗಳೊಂದಿಗೆ ಜನರು ಎಷ್ಟು ಆತ್ಮೀಯ ಭಾವನೆಯಿಂದ ಪ್ರವಾದಿಯವರ(ಸ) ಸ್ಥಿತಿಗತಿ ಮತ್ತು ಬೋಧನೆಗಳ ಬಗ್ಗೆ ವಿಚಾರಿಸಿಯಾರು ಎಂದು ಇದರಿಂದ ಅಂದಾಜಿಸಿಕೊಳ್ಳಿ.

ಪ್ರವಾದಿ ಸಂಗಾತಿಗಳ ಮೂಲಕ ಅನಂತರದ ಪೀಳಿಗೆಗೆ ತಲುಪಿದ ಪರಂಪರೆಗೆ ಆರಂಭದಿಂದಲೂ ಅಳವಡಿಸಿದ ವಿಧಾನವೇನೆಂದರೆ- ಪ್ರವಾದಿಯವರ(ಸ) ಮಾತನ್ನು ಯಾರಾದರೂ ಹೇಳಿದರೆ ಅದನ್ನು ಅವನು ಯಾರಿಂದ ಕೇಳಿದ್ದನು ಮತ್ತು ಮೇಲಿನಿಂದ ಪರಂಪರಾಗತವಾಗಿ ಅದನ್ನು ಯಾರು ಯಾರಿಗೆ ಹೇಳುತ್ತಾ ಬಂದಿದ್ದಾರೆ ಎಂದವನು ತಿಳಿಸಬೇಕಾಗಿತ್ತು. ಈ ಸರಣಿ ಪ್ರವಾದಿಯವರನ್ನು(ಸ) ಹೋಗಿ ಸೇರುವವರೆಗೂ ನೋಡಲಾಗುತ್ತಿತ್ತು. ಅದು ನಿಜವಾಗಿ ಪ್ರವಾದಿಯವರೇ(ಸ) ಹೇಳಿದ್ದೋ ಅಲ್ಲವೋ ಎಂಬ ಬಗ್ಗೆ ಖಾತ್ರಿ ಮಾಡಿಕೊಳ್ಳುವುದೇ ಇದರ ಉದ್ದೇಶವಾಗಿತ್ತು. ಯಾವುದೇ ಪರಂಪರೆಯ ಸರಣಿ ಪ್ರವಾದಿವರ್ಯರನ್ನು(ಸ) ಹೋಗಿ ಸೇರದಿದ್ದರೆ ಅದರ ಅಧಿಕೃತತೆ

ಸಂಶಯಾಸ್ಪದವಾಗುತ್ತಿತ್ತು. ಈ ಸರಣಿ ಪ್ರವಾದಿಯವರ(ಸ) ತನಕ ಹೋಗಿ ತಲಪಿದರೂ ನಡುವಿನ ಯಾವುದಾದರೊಬ್ಬ ನಿರೂಪಕ ವಿಶ್ವಾಸಾರ್ಹನೆನಿಸಿಕೊಳ್ಳದಿದ್ದರೆ ಆಗಲೂ ಅದನ್ನು ಸ್ವೀಕರಿಸಲಾಗುತ್ತಿರಲಿಲ್ಲ. ನೀವು ಸ್ವಲ್ಪ ಆಲೋಚಿಸಿದರೆ, ಜಗತ್ತಿನ ಬೇರಾವುದೇ ವ್ಯಕ್ತಿಯ ಸ್ಥಿತಿಗತಿಗಳು ಈ ರೀತಿ ಕ್ರೋಢೀಕರಣಗೊಳ್ಳದೇ ಇರುವುದು ನಿಮ್ಮ ಅನುಭವಕ್ಕೆ ಬರುತ್ತದೆ. ಇದು ಪ್ರವಾದಿಯವರಿಗೆ(ಸ) ಮಾತ್ರವಿರುವ ವೈಶಿಷ್ಟ್ಯ. ಅವರ ಬಗೆಗಿನ ಯಾವುದೇ ಮಾತನ್ನೂ ನಿರಾಧಾರವಾಗಿ ಒಪ್ಪಿಕೊಳ್ಳಲಾಗಲಿಲ್ಲ. ಅದರಲ್ಲೂ ಒಂದು ಪ್ರವಾದಿ ವಚನದ ಪರಂಪರೆ ಪ್ರವಾದಿಯವರನ್ನು(ಸ) ಹೋಗಿ ಸೇರುತ್ತದೆಯೇ ಎಂಬ ಆಧಾರವನ್ನು ಮಾತ್ರ ನೋಡದೆ ಪರಂಪರಾಗತವಾದ ನಿರೂಪಕರ ಪೈಕಿ ಎಲ್ಲರೂ ವಿಶ್ವಾಸಾರ್ಹರಾಗಿದ್ದರೋ ಇಲ್ಲವೋ ಎಂಬುದನ್ನೂ ಪರಿಗಣಿಸಲಾಯಿತು. ಈ ಉದ್ದೇಶಕ್ಕಾಗಿ ಪ್ರವಾದಿ ವಚನದ ನಿರೂಪಕರ ಸ್ಥಿತಿಗತಿಗಳನ್ನು ಆಮೂಲಾಗ್ರವಾಗಿ ಪರಿಶೀಲಿಸಲಾಯಿತಲ್ಲದೆ ಅದರ ಬಗ್ಗೆ ಸವಿವರವಾದ ಗ್ರಂಥಗಳನ್ನೇ ಬರೆಯಲಾಯಿತು. ಯಾರು ವಿಶ್ವಾಸಾರ್ಹರಾಗಿದ್ದರು ಮತ್ತು ಯಾರು ಅದಕ್ಕೆ ಅನರ್ಹರಾಗಿದ್ದರು. ಯಾರ ಚಾರಿತ್ರ್ಯ ಹೇಗಿತ್ತು, ಯಾರ ಜ್ಞಾಪಕಶಕ್ತಿ ಸರಿಯಾಗಿತ್ತು ಮತ್ತು ಯಾರದು ಸರಿಯಾಗಿರಲಿಲ್ಲ, ತಾವು ಪ್ರವಾದಿ ವಚನವನ್ನು ಮೂಲತಃ ಯಾರಿಂದ ಕೇಳಿದ್ದರೋ ಅವರನ್ನು ಯಾರೆಲ್ಲಾ ಭೇಟಿ ಮಾಡಿದ್ದರು ಮತ್ತು ಯಾರು ಭೇಟಿಯಾಗದೆಯೇ ಅವರ ಹೆಸರೆತ್ತಿ ಪ್ರವಾದಿ ವಚನವನ್ನು ನಿರೂಪಿಸಿದ್ದರು ಎಂಬುದನ್ನೆಲ್ಲಾ ಅದರಿಂದ ತಿಳಿಯಲು ಸಾಧ್ಯವಿದೆ. ಹೀಗೆ ಪ್ರವಾದಿ ವಚನದ ನಿರೂಪಕರ ಬಗ್ಗೆ ಎಷ್ಟು ದೊಡ್ಡ ಪ್ರಮಾಣದಲ್ಲಿ ವಿವರಗಳನ್ನು ಸಂಗ್ರಹಿಸಲಾಯಿತೆಂದರೆ ಇಂದಿಗೂ ಒಂದು ಪ್ರವಾದಿ ವಚನದ ಕುರಿತು ಅದು ನಂಬಲರ್ಹ ಮೂಲದಿಂದ ಬಂತೋ ಅಥವಾ ನಂಬಲನರ್ಹವಾದ ಮೂಲ ದಿಂದ ಬಂತೋ ಎಂದು ಪರಿಶೀಲಿಸಬಹುದಾಗಿದೆ. ಇಷ್ಟು ಸಾಧಾರವಾಗಿ ಜೀವನದ ವಿವರಗಳು ಉಲ್ಲೇಖಿಸಲ್ಪಟ್ಟಿರುವ ಮತ್ತೊಬ್ಬ ವ್ಯಕ್ತಿ ಮಾನವ ಇತಿಹಾಸದಲ್ಲಿ ದ್ದಾರೆಯೇ? ಒಬ್ಬ ವ್ಯಕ್ತಿಯ ಜೀವನದ ವಿವರಗಳನ್ನು ಸಂಗ್ರಹಿಸಲಿಕ್ಕಾಗಿ ಆ ವ್ಯಕ್ತಿಯ ಪರಂಪರೆಯ ಬಗ್ಗೆ ಏನನ್ನಾದರೂ ಹೇಳಿದಂತಹ ಸಹಸ್ರಾರು ವ್ಯಕ್ತಿಗಳ ಕುರಿತು ಸವಿವರ ವಾದ ಗ್ರಂಥಗಳನ್ನು ರಚಿಸಿರುವುದಕ್ಕೆ ಇದರ ಹೊರತು ಬೇರೆ ಉದಾಹರಣೆಗಳಿವೆಯೇ?

ಆಧುನಿಕ ಯುಗದ ಕ್ರೈಸ್ತ ಮತ್ತು ಯಹೂದಿ ವಿದ್ವಾಂಸರು ಪ್ರವಾದಿ ನುಡಿಗಳ ಅಧಿಕೃತತೆಯ ಬಗ್ಗೆ ಸಂಶಯ ಹುಟ್ಟಿಸಲು ಹೆಣಗಾಡುತ್ತಿದ್ದಾರೆ. ಅವರ ಧಾರ್ಮಿಕ

ಗ್ರಂಥಗಳು ಮತ್ತು ಧಾರ್ಮಿಕ ನಾಯಕರ ವಿವರಗಳಿಗೆ ಮೂಲತಃ ಯಾವುದೇ ಆಧಾರ ಪ್ರಮಾಣಗಳಿಲ್ಲದಿರುವ ಅಸೂಯೆಯೇ ಇದಕ್ಕೆ ಕಾರಣವಾಗಿದೆ. ಈ ಹೊಟ್ಟೆಕಿಚ್ಚಿನ ಫಲವಾಗಿ ಅವರು ಇಸ್ಲಾಮ್, ಪವಿತ್ರ ಕುರ್‌ಆನ್ ಮತ್ತು ಮುಹಮ್ಮದ್‌ರವರ(ಸ) ಬಗ್ಗೆ ವಿಮರ್ಶಿಸುವಾಗ ವೈಚಾರಿಕ ಪ್ರಾಮಾಣಿಕತೆ(Intellectual honesty)ಯನ್ನೂ ಒತ್ತೆಗಿಟ್ಟು ಬಿಡುತ್ತಾರೆ.

ಪ್ರವಾದಿಯವರ(ಸ) ಜೀವನದ ಪ್ರತಿಯೊಂದು ಮುಖವೂ ಸುವ್ಯಕ್ತ ಮತ್ತು ಚಿರಪರಿಚಿತವಾಗಿದೆ.

ಪ್ರವಾದಿಯವರ(ಸ) ವಿವರಗಳು ನಮಗೆ ವಿಶ್ವಸ್ಥ ಮೂಲದಿಂದ ಲಭ್ಯವಾಗಿರುವುದು ಮಾತ್ರ ಅವರ ವೈಶಿಷ್ಟ್ಯವಾಗಿರದೆ, ಇತಿಹಾಸದ ಬೇರಾವುದೇ ವ್ಯಕ್ತಿಯ ಜೀವನದ ಬಗ್ಗೆ ಸಿಗದಷ್ಟು ವಿವರಣೆಗಳು ಅವರ ಜೀವನದ ಪ್ರತಿಯೊಂದು ಮುಖದ ಬಗ್ಗೆ ಸಿಗುವುದೂ ಒಂದು ಪ್ರತ್ಯೇಕತೆಯಾಗಿದೆ. ಅವರ ಕುಟುಂಬ ಹೇಗಿತ್ತು? ಪ್ರವಾದಿತ್ವಕ್ಕೆ ಮೊದಲಿನ ಅವರ ಜೀವನ ಹೇಗಿತ್ತು? ಪ್ರವಾದಿತ್ವ ಅವರಿಗೆ ಲಭ್ಯವಾದುದು ಹೇಗೆ? ಅವರ ಮೇಲೆ ದೇವವಾಣಿ ಹೇಗೆ ಅವತೀರ್ಣ ಗೊಳ್ಳುತ್ತಿತ್ತು? ಅವರು ಇಸ್ಲಾಮಿನ ಸಂದೇಶವನ್ನು ಯಾವ ರೀತಿ ಪ್ರಚಾರ ಪಡಿಸಿದರು? ಭಿನ್ನಮತ ಮತ್ತು ಪ್ರತಿರೋಧಗಳನ್ನು ಎದುರಿಸಿದ್ದು ಹೇಗೆ? ತಮ್ಮ ಸಂಗಾತಿಗಳನ್ನು ಯಾವ ರೀತಿ ತರಬೇತು ಗೊಳಿಸಿದರು? ತಮ್ಮ ಮನೆಯಲ್ಲಿ ಅವರು ಹೇಗಿರುತ್ತಿದ್ದರು? ತಮ್ಮ ಮಡದಿ ಮಕ್ಕಳೊಂದಿಗೂ ಅವರ ವರ್ತನೆ ಹೇಗಿತ್ತು? ಯಾವ ನೈತಿಕತೆಯನ್ನು ಅವರು ಬೋಧಿಸುತ್ತಿದ್ದರು? ಸ್ವತಃ ಅವರ ಚಾರಿತ್ರ್ಯ ಹೇಗಿತ್ತು? ಯಾವುದನ್ನು ಮಾಡಲು ಅವರು ಆದೇಶಿಸಿದರು? ಯಾವುದನ್ನು ಮಾಡುವುದರಿಂದ ತಡೆದರು? ಯಾವ ಕೆಲಸ ನಡೆಯುತ್ತಿರುವುದನ್ನು ಕಂಡು ಅದನ್ನು ತಡೆಯಲಿಲ್ಲ ಮತ್ತು ಯಾವುದರಿಂದ ಅದು ಸಂಭವಿಸುತ್ತಿದ್ದಾಗ ತಡೆದರು, ಇದೆಲ್ಲವೂ ಅಲ್ಪಸ್ವಲ್ಪ ವಿವರಗಳೊಂದಿಗೆ ಪ್ರವಾದಿ ವಚನ ಮತ್ತು ಪ್ರವಾದಿ ಜೀವನಚರ್ಯೆಯ ಗ್ರಂಥಗಳಲ್ಲಿ ಲಭ್ಯವಿದೆ. ಅವರೊಬ್ಬ ಸೇನಾ ದಂಡನಾಯಕರೂ ಆಗಿದ್ದರು ಮತ್ತು ಅವರ ನೇತೃತ್ವದಲ್ಲಿ ನಡೆದ ಎಲ್ಲಾ ಯುದ್ಧಗಳ ವಿವರಗಳು ನಮಗೆ ಸಿಗುತ್ತವೆ. ಅವರೊಬ್ಬ ಆಡಳಿತಾಧಿಕಾರಿಯಾಗಿದ್ದರು ಮತ್ತು ಅವರ ಸರ್ಕಾರದ ಎಲ್ಲಾ ವಿವರಗಳು ನಮಗೆ ಲಭ್ಯವಿದೆ. ಅವರೊಬ್ಬ ನ್ಯಾಯಾಧೀಶರಾಗಿದ್ದರು ಮತ್ತು ಅವರ ಮುಂದೆ ಬಂದ ಎಲ್ಲಾ ಮೊಕದ್ದಮೆಗಳ ಸಂಪೂರ್ಣ ವರದಿ ನಮಗೆ

ಲಭ್ಯವಿದೆ. ಅಲ್ಲದೆ ಯಾವ ಮೊಕದ್ದಮೆಗೆ ಅವರು ಎಂತಹ ತೀರ್ಪು ನೀಡಿದರು ಎಂದೂ ತಿಳಿದು ಬರುತ್ತದೆ. ಅವರು ಪೇಟೆಗೂ ಹೋಗುತ್ತಿದ್ದರು ಮತ್ತು ಜನರು ಕ್ರಯ-ವಿಕ್ರಯಗಳನ್ನು ಹೇಗೆ ಮಾಡುತ್ತಿದ್ದಾರೆ ಎಂಬುದನ್ನೂ ವೀಕ್ಷಿಸುತ್ತಿದ್ದರು. ಅಲ್ಲಿ ತಪ್ಪು ಸಂಭವಿಸಿದರೆ ಅದನ್ನು ತಡೆಯುತ್ತಿದ್ದರು. ಸರಿಯಾಗಿ ನಡೆದ ವ್ಯವಹಾರವನ್ನು ಅನುಮೋದಿಸುತ್ತಿದ್ದರು. ಒಟ್ಟಿನಲ್ಲಿ ಅವರು ಸವಿವರವಾದ ಮಾರ್ಗದರ್ಶನಗಳನ್ನು ನೀಡಿರದಂತಹ ಜೀವನದ ಯಾವ ಕ್ಷೇತ್ರವೂ ಉಳಿದಿಲ್ಲ.

ಈ ಕಾರಣದಿಂದಲೇ ಎಲ್ಲಾ ಪ್ರವಾದಿಗಳು ಮತ್ತು ಧಾರ್ಮಿಕ ನಾಯಕರುಗಳ ಪೈಕಿ ಸಮಗ್ರ ಮಾರ್ಗದರ್ಶನಕ್ಕಾಗಿ ಮಾನವಕುಲ ಪ್ರವಾದಿ ಮುಹಮ್ಮದ್(ಸ) ಅವರತ್ತಲೇ ತಿರುಗಬೇಕಾಗುತ್ತದೆ ಎಂದು ನಾವು ಯಾವುದೇ ಪಕ್ಷಪಾತವಿಲ್ಲದೆ ಪೂರ್ಣ ಜ್ಞಾನ ಮತ್ತು ವಿಶ್ವಾಸದೊಂದಿಗೆ ಹೇಳಬಹುದು. ಏಕೆಂದರೆ ಅವರು ಸಮರ್ಪಿಸಿದ ಗ್ರಂಥ ತನ್ನ ಮೂಲರೂಪದಲ್ಲಿ ಸುರಕ್ಷಿತವಾಗಿದೆ. ಸನ್ಮಾರ್ಗದರ್ಶನಕ್ಕೆ ಬೇಕಾದ ಎಲ್ಲಾ ವಿವರಗಳೊಂದಿಗೆ ಅವರ ಜೀವನಚರ್ಯೆಯೂ ಅತ್ಯಂತ ವಿಶ್ವಸ್ಥ ಮೂಲದಿಂದ ನಮಗೆ ತಲಪಿದೆ.

ಅವರ ಪಾವನ ಜೀವನಚರ್ಯೆ ನಮಗೆ ಯಾವ ಸಂದೇಶ ಮತ್ತು ಯಾವ ಮಾರ್ಗದರ್ಶನವನ್ನು ನೀಡುತ್ತದೆಂದು ನಮಗೀಗ ನೋಡಬೇಕಾಗಿದೆ.

## ಪ್ರವಾದಿವರ್ಯರ(ಸ) ಸಂದೇಶ ಸಮಸ್ತ ಮಾನವರಿಗಾಗಿದೆ

ಅವರ ಸಂದೇಶದಲ್ಲಿ ಕಂಡುಬರುವ ಪ್ರಾಥಮಿಕ ಅಂಶವೇನೆಂದರೆ ಅವರು ವರ್ಣ, ವರ್ಗ, ಭಾಷೆ ಮತ್ತು ದೇಶ ಎಂಬ ಎಲ್ಲಾ ಭಿನ್ನತೆಗಳನ್ನು ಕಡೆಗಣಿಸಿ ಮನುಷ್ಯನನ್ನು ಮನುಷ್ಯನೆಂಬ ನೆಲೆಯಲ್ಲಿ ಅಭಿಸಂಬೋಧಿಸುತ್ತಾರೆ ಮತ್ತು ಸಮಸ್ತ ಮಾನವರ ಅಭ್ಯುದಯಕ್ಕೆ ಬೇಕಾದ ಕೆಲವು ಆದರ್ಶಗಳನ್ನು ಮುಂದಿಡುತ್ತಾರೆ. ಈ ಆದರ್ಶಗಳನ್ನು ಒಪ್ಪಿದ ಪ್ರತಿಯೊಬ್ಬನೂ ಮುಸ್ಲಿಮನೆನಿಸಿಕೊಳ್ಳುತ್ತಾನೆ ಮತ್ತು ಜಾಗತಿಕ ಮುಸ್ಲಿಮ್ ಸಮುದಾಯದ ಸದಸ್ಯನಾಗಿ ಮಾರ್ಪಡುತ್ತಾನೆ. ಅವನು ಕರಿಯನಾಗಲಿ, ಬಿಳಿಯನಾಗಲಿ, ಪೂರ್ವದ ನಿವಾಸಿಯಾಗಿರಲಿ, ಪಶ್ಚಿಮದ ನಿವಾಸಿಯಾಗಿರಲಿ, ಅರಬನಾಗಿರಲಿ ಅಥವಾ ಅರಬೇತರನಾಗಿರಲಿ ಅವನು ಎಲ್ಲಿಯವನೇ ಆದರೂ ಅವನು ಯಾವ ದೇಶ ಮತ್ತು ಕುಲಗೋತ್ರದಲ್ಲಿ ಹುಟ್ಟಿದವನಾದರೂ ಎಂತಹ ಮೈಬಣ್ಣವನ್ನು

ಹೊಂದಿದವನಾದರೂ ಪ್ರವಾದಿಯವರ(ಸ) ಸಂದೇಶದ ಅಭಿಸಂಬೋಧಿತನೇ ಆಗಿದ್ದಾನೆ. ಅವನು ಅವರು ಸಮರ್ಪಿಸುವ ಆದರ್ಶಗಳನ್ನು ಒಪ್ಪಿಕೊಳ್ಳುವುದಾದರೆ ಸರ್ವಸಾಮಾನ್ಯವಾದ ಹಕ್ಕುಗಳೊಂದಿಗೆ ಮುಸ್ಲಿಮ್ ಸಮುದಾಯದಲ್ಲಿ ಸೇರ್ಪಡೆ ಯಾಗುತ್ತಾನೆ. ವಿಶ್ವಾಸದ ಏಕತೆ ಒಡಮೂಡಿದ ಬಳಿಕ ಮನುಷ್ಯನನ್ನು ಮನುಷ್ಯ ನಿಂದ ಪ್ರತ್ಯೇಕಿಸುವ ಯಾವುದೇ ಅಸ್ಪೃಶ್ಯತೆ, ಉಚ್ಚ-ನೀಚತೆ, ಕುಲ-ಗೋತ್ರಗಳ ಭಿನ್ನತೆ, ಭಾಷೆ, ರಾಷ್ಟ್ರ ಮತ್ತು ಭೌಗೋಳಿಕ ವ್ಯತ್ಯಾಸಗಳು ಈ ಸಮುದಾಯದಲ್ಲಿ ಅಸ್ತಿತ್ವದಲ್ಲಿಲ್ಲ.

## ವರ್ಣ ಮತ್ತು ವಂಶ ಪಕ್ಷಪಾತಕ್ಕೆ ಅತ್ಯುತ್ತಮ ಪರಿಹಾರ

ಇದು ಮುಹಮ್ಮದ್‌ರ(ಸ) ಮೂಲಕ ಮಾನವಕುಲಕ್ಕೆ ದೊರೆತ ಅತ್ಯುತ್ಕೃಷ್ಟ ಅನುಗ್ರಹವಾಗಿದೆ ಎಂಬುದು ಆಲೋಚಿಸಿದರೆ ನಿಮ್ಮ ಗಮನಕ್ಕೆ ಬರುತ್ತದೆ. ಮನುಷ್ಯನನ್ನು ಅತಿ ಹೆಚ್ಚು ನಾಶಕ್ಕೊಳಪಡಿಸಿರುವ ಸಾಧನವೆಂದರೆ ಮಾನವ-ಮಾನವರ ನಡುವೆ ನಿರ್ಮಿಸಲಾಗಿರುವ ಭೇದಭಾವಗಳೇ ಆಗಿವೆ. ಕೆಲವೆಡೆ ಅವನನ್ನು ಅಪವಿತ್ರ ನೆಂದು ಪರಿಗಣಿಸಲಾಗಿದೆ. ಕೆಲವೆಡೆ ಅಸ್ಪೃಶ್ಯನನ್ನಾಗಿ ಮಾಡಿ ಓರ್ವ ಬ್ರಾಹ್ಮಣನಿಗೆ ಇರುವಂತಹ ಹಕ್ಕುಗಳಿಂದ ಅವನನ್ನು ವಂಚಿಸಲಾಗಿದೆ. ಆಸ್ಟ್ರೇಲಿಯಾ ಮತ್ತು ಅಮೇರಿಕಾದಲ್ಲಿ ವಿದೇಶೀ ವಲಸಿಗರು ಅವನ ಎತ್ತಂಗಡಿಯನ್ನು ಬಯಸಿದ ಸಂದರ್ಭ ದಲ್ಲಿ ಅಲ್ಲಿ ಹುಟ್ಟಿದ್ದಕ್ಕಾಗಿ ಅವನನ್ನು ವಿನಾಶಕ್ಕೆ ಮಾತ್ರ ಯೋಗ್ಯ ಎಂದು ಪರಿಗಣಿಸ ಲಾಯಿತು. ಆಫ್ರಿಕಾದಲ್ಲಿ ಕಪ್ಪು ವರ್ಣ ತಾಳಿ ಹುಟ್ಟಿದ ತಪ್ಪಿಗಾಗಿ ಅವನನ್ನು ಹಿಡಿದು ಗುಲಾಮನನ್ನಾಗಿ ಮಾಡಲಾಯಿತಲ್ಲದೆ ಪ್ರಾಣಿಯಂತೆ ಅವನನ್ನು ದುಡಿಸಲಾಯಿತು. ಅಂತೂ ವರ್ಗ, ವಂಶ, ದೇಶ, ಭಾಷೆ ಮತ್ತು ವರ್ಣ ಪಕ್ಷಪಾತಗಳು ಪುರಾತನ ಕಾಲದಿಂದ ಇಂದಿನ ತನಕ ಮಾನವಕುಲಕ್ಕೆ ಮಾರಕವಾಗಿ ಪರಿಣಮಿಸಿದೆ. ಈ ಆಧಾರದಲ್ಲಿ ಕಲಹಗಳು ನಡೆದಿವೆ. ಒಂದು ರಾಷ್ಟ್ರ ಇನ್ನೊಂದು ರಾಷ್ಟ್ರದ ಮೇಲೆ ದಂಡೆತ್ತಿ ಹೋಗಿದೆ. ಒಂದು ಸಮುದಾಯ ಮತ್ತೊಂದನ್ನು ಸೂರೆಗೈದಿದೆ. ಅನೇಕ ಗೋತ್ರಗಳು ಈ ಮೇಲಾಟದಲ್ಲಿ ನಶಿಸಿ ಹೋಗಿವೆ. ಪ್ರವಾದಿಯವರು(ಸ) ಈ ಜಾಡ್ಯವನ್ನು ಹೇಗೆ ಪರಿಹರಿಸಿದರೆಂದರೆ ವರ್ಣ, ವಂಶ ಮತ್ತು ದೇಶಗಳ ನಡುವಿನ ಪಕ್ಷಪಾತವನ್ನು ಇಸ್ಲಾಮ್ ಪರಿಹರಿಸಿರುವಂತೆ ಮತ್ತಾರೂ ಪರಿಹರಿಸುವಲ್ಲಿ ಸಫಲರಾಗಿಲ್ಲ ಎಂದು ಇಸ್ಲಾಮಿನ ಶತ್ರುಗಳೂ ಒಪ್ಪಿಕೊಳ್ಳುತ್ತಾರೆ.

ಒಂದೊಮ್ಮೆ ಬಿಳಿಯರ ವಿರುದ್ಧ ಕರಿಯ ವಂಶದ ತೀವ್ರ ಪಕ್ಷಪಾತದ ವಕ್ತಾರರಾಗಿದ್ದ ಅಮೇರಿಕಾದ ಆಫ್ರಿಕನ್ ಮೂಲದ ಪೌರರ ಖ್ಯಾತ ನೇತಾರರಾಗಿದ್ದ ಮಾಲ್ಕಮ್ ಎಕ್ಸ್ ಇಸ್ಲಾಮ್ ಸ್ವೀಕರಿಸಿದ ಬಳಿಕ ಹಜ್ಜ್ ಕರ್ಮ ನಿರ್ವಹಿಸಲು ಹೋದರು. ಪೂರ್ವ - ಪಶ್ಚಿಮ ಮತ್ತು ಉತ್ತರ - ದಕ್ಷಿಣದಿಂದ ಎಲ್ಲಾ ದೇಶಕ್ಕೆ ಸೇರಿದ ಪ್ರತಿಯೊಂದು ವಂಶಕ್ಕೆ ಸೇರಿದ ಬೇರೆ ಬೇರೆ ಭಾಷೆಯನ್ನು ಮಾತನಾಡುವ ಜನರು ಅಲ್ಲಿ ಬರುತ್ತಿರುವುದನ್ನು ಅವರು ಕಂಡರು. ಎಲ್ಲರೂ ಒಂದೇ ರೀತಿಯ ಇಹ್ರಾಮ್ ವಸ್ತ್ರ(ಹಜ್ಜ್ ನಿರ್ವಹಿಸುವಾಗ ಧರಿಸುವ ಶ್ವೇತ ವಸ್ತ್ರ)ವನ್ನು ಧರಿಸಿದ್ದಾರೆ. ಎಲ್ಲರೂ ಒಕ್ಕೊರಳಿನಿಂದ 'ಲಬ್ಬೈಕ್ ಲಬ್ಬೈಕ್' ಎಂಬ ಘೋಷಣೆಯನ್ನು ಮೊಳಗಿಸುತ್ತಿದ್ದಾರೆ, ಒಟ್ಟಾಗಿ ಪ್ರದಕ್ಷಿಣೆ ಮಾಡುತ್ತಿದ್ದಾರೆ. ಎಲ್ಲರೂ ಒಂದೇ ಇಮಾಮ್‌ನ ಹಿಂದೆ ಸಾಮೂಹಿಕವಾಗಿ ನಮಾಝ್ ನಿರ್ವಹಿಸುತ್ತಿದ್ದಾರೆ. ಇದನ್ನು ಕಂಡು 'ವರ್ಣ ಮತ್ತು ವಂಶ ಪಕ್ಷಪಾತಕ್ಕೆ ಇದುವೇ ನೈಜ ಪರಿಹಾರ, ನಾವು ಮಾಡುತ್ತಿರುವುದೊಂದೂ ಅಲ್ಲ' ಎಂದವರು ಉದ್ಗರಿಸಿಬಿಟ್ಟರು. ಆ ಮಹಾನುಭಾವರನ್ನು ಅಕ್ರಮಿಗಳು, ಕೊಲೆಗೈದ ರಾದರೂ ಅವರು ಬರೆದ ಆತ್ಮಕಥನ ಈಗಲೂ ಉಳಿದು ಕೊಂಡಿದೆ. ಹಜ್ಜ್ ಕರ್ಮದಿಂದ ಅವರೆಷ್ಟು ಪ್ರಭಾವಿತರಾಗಿದ್ದರು ಎಂಬುದನ್ನು ನೀವು ಅದರಲ್ಲಿ ಕಂಡುಕೊಳ್ಳಬಹುದು.

'ಹಜ್ಜ್' ಇಸ್ಲಾಮಿನ ಆರಾಧನಾ ಕರ್ಮಗಳ ಪೈಕಿ ಒಂದು ಕರ್ಮ ಮಾತ್ರವಾಗಿದೆ. ಇಸ್ಲಾಮಿನ ಎಲ್ಲಾ ಬೋಧನೆಗಳನ್ನು ಒಬ್ಬ ಕಣ್ತೆರೆದು ನೋಡಿದರೆ ಅದರ ಇಂತಿಂತಹ ಅಂಶಗಳು ವಿಶಿಷ್ಟ ವರ್ಗ, ವಂಶ ಮತ್ತು ಗೋತ್ರಕ್ಕೆ ಮಾತ್ರ ಅನ್ವಯಿಸುತ್ತದೆ ಎಂದು ಯಾವುದನ್ನೂ ಬೊಟ್ಟು ಮಾಡಿ ತೋರಿಸಲಾರ. ಈ ಧರ್ಮ ಸರ್ವಮಾನವರಿಗಾಗಿದೆ, ಅದರ ದೃಷ್ಟಿಯಲ್ಲಿ ಅದರ ತತ್ವಗಳನ್ನು ಅಂಗೀಕರಿಸಿ ಅದು ನಿರ್ಮಿಸುವ ವಿಶ್ವ ಭ್ರಾತೃತ್ವಕ್ಕೆ ಸೇರುವ ಸಮಸ್ತ ಮಾನವರೂ ಸಮಾನರಾಗಿದ್ದಾರೆ ಎಂದು ಈ ಇಡೀ ಧರ್ಮವೇ ಸಾರಿ ಹೇಳುತ್ತದೆ. ಬಿಳಿಯರು ಕರಿಯರೊಂದಿಗೆ ವರ್ತಿಸಿದ ರೀತಿಯಲ್ಲಿ, ಸಾಮ್ರಾಜ್ಯಶಾಹಿಗಳು ತಮ್ಮ ಅಧೀನವಿರುವ ಜನಾಂಗದೊಂದಿಗೆ ವರ್ತಿಸಿದ ರೂಪದಲ್ಲಿ, ಕಮ್ಯೂನಿಸ್ಟ್ ಸರ್ಕಾರಗಳು ತಮ್ಮ ಸ್ವಾಧೀನವಿದ್ದ ಕಮ್ಯೂನಿಸ್ಟೇತರರೊಂದಿಗೆ ಮತ್ತು ಸ್ವತಃ ತಮ್ಮ ಪಕ್ಷದ ಭಿನ್ನಮತೀಯರೊಂದಿಗೆ ವ್ಯವಹರಿಸಿದಂತೆ ಅದು ಮುಸ್ಲಿಮೇತರರೊಂದಿಗೆ ವರ್ತಿಸುವುದಿಲ್ಲ.

ಮಾನವಕುಲದ ವಿಜಯಕ್ಕಾಗಿ ಪ್ರವಾದಿ ಮುಹಮ್ಮದ್(ಸ) ಸಮರ್ಪಿಸಿದ ಆ ತತ್ವಗಳಾವುವು ಮತ್ತು ಮನುಷ್ಯನ ಯಶಸ್ಸಿನ ಭರವಸೆ ನೀಡುವುದರ ಜೊತೆಗೆ ಎಲ್ಲಾ ಮಾನವರನ್ನು ಏಕ ಸಮುದಾಯವಾಗಿ ಒಂದುಗೂಡಿಸುವಂತಹ ಯಾವ ಅಂಶಗಳು ಅದರಲ್ಲಿವೆ ಎಂಬುದನ್ನು ನಾವೀಗ ನೋಡಬಹುದಾಗಿದೆ.

## ಏಕದೇವತ್ವದ ವಿಶಾಲ ಕಲ್ಪನೆ

ದೇವನ ಏಕತೆಯನ್ನು ಅಂಗೀಕರಿಸುವುದು ಅದರಲ್ಲಿ ಪ್ರಾಥಮಿಕವಾದುದು. ಅಲ್ಲಾಹನು ಇದ್ದಾನೆ ಮತ್ತು ಅವನು ಏಕನಾಗಿದ್ದಾನೆ ಎಂಬ ಅರ್ಥದಲ್ಲಿ ಮಾತ್ರವಲ್ಲ, ಬದಲಾಗಿ ಈ ನಿಸರ್ಗದ ಏಕೈಕ ಸೃಷ್ಟಿಕರ್ತ, ಪ್ರಭು, ಅಧಿಪತಿ ಮತ್ತು ಒಡೆಯ ಅಲ್ಲಾಹನೇ ಆಗಿದ್ದಾನೆ. ಆಜ್ಞಾಪಿಸುವ ಮತ್ತು ನಿಷೇಧಿಸುವ ಹಕ್ಕಿರುವ, ಆಜ್ಞೆಯಿಂದ ಸಿಂಧು-ಅಸಿಂಧುಗಳು ನಿರ್ಣಯಿಸಲ್ಪಡುವ ಆಜ್ಞಾಧಿಕಾರವುಳ್ಳವನು ಈ ಸಮಸ್ತ ವಿಶ್ವದಲ್ಲಿ ಮತ್ತಾರೂ ಇಲ್ಲ. ಈ ಅಧಿಕಾರ ಅವನಿಗೆ ಮಾತ್ರ ಸೀಮಿತವಾಗಿದೆ ಎಂಬ ಅರ್ಥದಲ್ಲಿ ಅವನನ್ನು ಅಂಗೀಕರಿಸಬೇಕು. ಏಕೆಂದರೆ ಸೃಷ್ಟಿಕರ್ತ ಮತ್ತು ಪ್ರಭುವಿಗೆ ಮಾತ್ರ ತಾನು ಸೃಷ್ಟಿಸಿದ ಜಗತ್ತಿನಲ್ಲಿ ತನ್ನ ದಾಸರ ಪಾಲಿಗೆ ಯಾವುದನ್ನು ಬೇಕಾದರೂ ನಿಷೇಧಿಸುವ ಅಥವಾ ವಿಧಿಸುವ ಅಧಿಕಾರವಿರುತ್ತದೆ. ಅಲ್ಲಾಹನ ವಿನಾ ನಾವು ಯಾರ ದಾಸರೂ ಅಲ್ಲ ಮತ್ತು ಯಾರಿಗೂ ಅವನ ನಿಯಮಗಳಿಗೆ ವಿರುದ್ಧವಾಗಿ ನಮಗೆ ಆಜ್ಞಾಪಿಸುವ ಹಕ್ಕಿಲ್ಲ ಎಂಬ ನೆಲೆಯಲ್ಲಿ ಅಲ್ಲಾಹನ ಮೇಲೆ ವಿಶ್ವಾಸವಿಡಬೇಕೆಂದು ಅಲ್ಲಾಹನು ನಮಗೆ ಕರೆಕೊಡುತ್ತಾನೆ. ನಮ್ಮ ಶಿರಗಳು ಅವನನ್ನು ಬಿಟ್ಟು ಮತ್ತಾರ ಮುಂದೆಯೂ ಬಾಗಲಿಕ್ಕಾಗಿ ಸೃಷ್ಟಿಯಾಗಿಲ್ಲವೆಂದು ಅವನಲ್ಲಿ ವಿಶ್ವಾಸವಿಡಬೇಕು. ನಮ್ಮ ಭವಿಷ್ಯವನ್ನು ರೂಪಿಸುವವನೂ ಹಾಳು ಮಾಡುವವನೂ ಅವನೇ ಆಗಿದ್ದಾನೆ ಎಂಬ ರೂಪದಲ್ಲಿ ನಾವು ಅವನನ್ನು ನಂಬಬೇಕು. ನಮ್ಮ ಸಾವು-ಬದುಕು ಅವನ ನಿಯಂತ್ರಣದಲ್ಲಿದೆ. ಅವನು ಬಯಸಿದಾಗ ನಮ್ಮ ಮರಣ ಸಂಭವಿಸುವುದು ಮತ್ತು ಬಯಸಿದಷ್ಟು ದಿನ ಅವನು ನಮ್ಮನ್ನು ಜೀವಂತವಿರಿಸುತ್ತಾನೆ. ಅವನ ವತಿಯಿಂದ ಮೃತ್ಯು ಬಂದರೆ ಯಾರಿಗೂ ಬದುಕಿಸಲು ಸಾಧ್ಯವಿಲ್ಲ ಮತ್ತು ಅವನು ಜೀವನ ದಯಪಾಲಿಸಿದರೆ ಯಾರಿಗೂ ಅದನ್ನು ಮುಗಿಸಿಬಿಡಲು ಸಾಧ್ಯವಿಲ್ಲವೆಂದು ಅವನಲ್ಲಿ ವಿಶ್ವಾಸವಿರಿಸಬೇಕು. ಇದು ಇಸ್ಲಾಮಿನಲ್ಲಿ ದೇವನ ಬಗೆಗಿನ ಕಲ್ಪನೆ.

ಈ ಕಲ್ಪನೆಯ ಪ್ರಕಾರ ಭೂಮಿಯಿಂದ ಆಗಸದ ತನಕ ಸಮಸ್ತ ನಿಸರ್ಗ ದೇವನಿಗೆ

ಅಧೀನವಾಗಿದೆ. ಈ ನಿಸರ್ಗದಲ್ಲಿ ವಾಸಿಸುವ ಮನುಷ್ಯರೂ ದೇವನಿಗೆ ಅಧೀನ ವಾಗಿರಬೇಕಾಗಿದೆ. ಅವನು ಸ್ವತಂತ್ರನಾಗಿ ಬದುಕಿದರೆ ಇಲ್ಲವೇ ದೇವನ ವಿನಾ ಬೇರೆಯವರನ್ನು ಅನುಸರಿಸಿದರೆ ಅವನ ಜೀವನ ವ್ಯವಸ್ಥೆ ನಿಸರ್ಗದ ಒಟ್ಟು ವ್ಯವಸ್ಥೆ ಗಿಂತ ಭಿನ್ನವಾಗಿ ಪರಿಣಮಿಸುವುದು. ಬೇರೆ ಪದಗಳಲ್ಲಿ ಹೇಳುವುದಾದರೆ ಸಮಸ್ತ ನಿಸರ್ಗ ದೇವನ ಆಜ್ಞೆಗೆ ಅನುಗುಣವಾಗಿ ನಡೆಯುತ್ತಿದೆ. ಇದನ್ನು ಯಾರಿಂದಲೂ ಬದಲಿಸಲು ಸಾಧ್ಯವಿಲ್ಲವೆಂಬುದು ಒಂದು ವಸ್ತುಸ್ಥಿತಿ. ಅದೇ ವೇಳೆ ನಾವು ದೇವನ ಹೊರತು ಬೇರೆಯವರ ಆಜ್ಞೆಗಳಿಗೆ ಬದ್ಧವಾಗಿ ನಡೆದರೆ ಅಥವಾ ನಮ್ಮ ಸ್ವೇಚ್ಛೆಗೆ ಅನುಗುಣವಾಗಿ ಮನಬಂದಂತೆ ವರ್ತಿಸಿದರೆ ನಮ್ಮ ಜೀವನದ ರಥ ಸಮಸ್ತ ನಿಸರ್ಗದ ಚಲನಕ್ಕೆ ವಿರುದ್ಧ ದಿಕ್ಕಿನಲ್ಲಿ ಸಾಗುತ್ತಿದೆ ಎಂದಾಯಿತು. ಇದು ನೈಸರ್ಗಿಕ ವ್ಯವಸ್ಥೆ ಮತ್ತು ನಮ್ಮ ನಡುವೆ ಸಂಭವಿಸುತ್ತಿರುವ ನಿರಂತರ ವಿರೋಧಾಭಾಸವಾಗುವುದು.

ಮತ್ತೊಂದು ರೀತಿಯಲ್ಲಿ ನೋಡಿದರೆ, ಈ ಕಲ್ಪನೆಯ ಪ್ರಕಾರ ದೇವನನ್ನು ಅನುಸರಿಸುವುದೇ ಮನುಷ್ಯನ ಸರಿಯಾದ ಜೀವನ ವಿಧಾನ. ಏಕೆಂದರೆ ಅವನು ಅಲ್ಲಾಹನ ಸೃಷ್ಟಿಯಾಗಿದ್ದು ಅವನ ಸೃಷ್ಟಿಕರ್ತ ಅಲ್ಲಾಹನಾಗಿದ್ದಾನೆ. ಸೃಷ್ಟಿ ಎಂಬ ನೆಲೆಯಲ್ಲಿ ಅವನು ಸ್ವತಂತ್ರನಾಗಿ ಬದುಕುವುದು ಮತ್ತು ತನ್ನ ಸೃಷ್ಟಿಕರ್ತನ ಹೊರತು ಅನ್ಯರ ದಾಸ್ಯ - ಆರಾಧನೆ ಮಾಡುವುದೆರಡೂ ತಪ್ಪು ಕಾರ್ಯಗಳಾಗಿವೆ. ಈ ಎರಡೂ ಮಾರ್ಗಗಳ ಪೈಕಿ ಯಾವುದನ್ನು ಅನುಸರಿಸಿದರೂ ವಾಸ್ತವಿಕತೆಗೆ ವಿರುದ್ಧವಾಗಿ ನಡೆದಂತಾಗುವುದು ಮತ್ತು ವಸ್ತುಸ್ಥಿತಿಗೆ ವಿರುದ್ಧವಾಗಿ ನಡೆದುದರ ನಷ್ಟವನ್ನು ಸ್ವತಃ ಅವನು ಅನುಭವಿಸಬೇಕೇ ಹೊರತು ವಸ್ತುಸ್ಥಿತಿಯ ಮೇಲೆ ಅದರಿಂದೇನೂ ಪ್ರಭಾವ ಉಂಟಾಗುವುದಿಲ್ಲ.

## ದೇವನ ದಾಸ್ಯ - ಆರಾಧನೆಯ ಕರೆ

ಈ ವೈರುಧ್ಯವನ್ನು ಹೋಗಲಾಡಿಸಬೇಕೆಂಬುದೇ ಪ್ರವಾದಿವರ್ಯ(ಸ) ಕರೆ. ಸಮಸ್ತ ನಿಸರ್ಗದ ನಿಯಮಗಳೇ ನಿಮ್ಮ ಜೀವನದ ನಿಯಮಗಳಾಗಬೇಕು. ನೀವು ಸ್ವತಃ ಶಾಸನ ನಿರ್ಮಾತೃಗಳಾಗಬಾರದು. ಹಾಗೆಯೇ ದೇವನ ಭೂಮಿಯಲ್ಲಿ ಅವನ ದಾಸರ ಮೇಲೆ ಇನ್ನಿತರರು ಚಲಾಯಿಸುವ ಹಕ್ಕು ಎಂದೂ ಮನ್ನಿಸಬಾರದು. ದೇವನ ಶಾಸನ ಮಾತ್ರ ಪರಮ ಸತ್ಯವಾದುದು. ಉಳಿದುದೆಲ್ಲಾ ಮಿಥ್ಯ ಶಾಸನಗಳು.

## ಪ್ರವಾದಿಯ ಅನುಸರಣೆಯ ಕರೆ

ಇದೀಗ ಪ್ರವಾದಿಯವರ(ಸ) ಸಂದೇಶದ ಎರಡನೆಯ ಅಂಶ ನಮ್ಮ ಮುಂದೆ ಬರುತ್ತದೆ. ನಾನು ಅಲ್ಲಾಹನ ಪ್ರವಾದಿಯಾಗಿದ್ದೇನೆ ಮತ್ತು ಅವನು ನನ್ನ ಮೂಲಕ ಸಮಸ್ತ ಮಾನವರಿಗೆ ಬೇಕಾದ ಕಾನೂನುಗಳನ್ನು ಕಳುಹಿಸಿದ್ದಾನೆ ಎಂದವರು ಸ್ಪಷ್ಟವಾಗಿ ಸಾರಿ ಹೇಳಿದ್ದರು. ಈ ಕಾನೂನನ್ನು ಪಾಲಿಸಲು ಸ್ವತಃ ನಾನೂ ನಿರ್ಬಂಧಿತನಾಗಿದ್ದೇನೆ. ಅದರಲ್ಲಿ ಯಾವುದೇ ರೀತಿಯ ಬದಲಾವಣೆ ಮಾಡುವ ಹಕ್ಕು ನನಗಿಲ್ಲ. ಬದಲಾಗಿ ನಾನು ಅದನ್ನು ಅನುಸರಿಸಲು ನಿಯುಕ್ತನಾಗಿದ್ದೇನೆ. ಅದರಲ್ಲಿ ಯಾವುದೇ ಹೊಸ ವಿಚಾರಗಳನ್ನು ಸೇರಿಸಲು ನನಗೆ ಹಕ್ಕಿಲ್ಲ. ಪವಿತ್ರ ಕುರ್‌ಆನ್ ದೇವನ ವತಿಯಿಂದ ನನ್ನ ಮೇಲೆ ಅವತೀರ್ಣಗೊಂಡ ಶಾಸನವಾಗಿದೆ. ದೇವನ ಆದೇಶದ ಪ್ರಕಾರ ನಾನು ನಿರ್ವಹಿಸುವ ಕರ್ಮಗಳೇ ನನ್ನ ಚರ್ಯೆಯಾಗಿದೆ. ಈ ಕಾನೂನಿಗೆ ಮೊಟ್ಟಮೊದಲು ಸಮ್ಮತಿ ಸೂಚಿಸುವವನು ನಾನಾಗಿದ್ದೇನೆ (ಅನ ಅವ್ವಲುಲ್ ಮುಸ್ಲಿಮೀನ್). ಇತರೆಲ್ಲಾ ಕಾನೂನುಗಳನ್ನು ಬಿಟ್ಟು ಈ ಕಾನೂನನ್ನು ಅನುಸರಿಸುವಂತೆ ನಾನು ಜಗತ್ತಿನ ಸಮಸ್ತ ಮಾನವರನ್ನು ಆಹ್ವಾನಿಸುತ್ತೇನೆ ಎಂದವರು ಹೇಳಿದ್ದರು.

## ಅಲ್ಲಾಹನ ನಂತರ ಪ್ರವಾದಿಯ ಅನುಸರಣೆ

ಪ್ರವಾದಿಯವರು(ಸ) ತಮ್ಮದೇ ಮಾತು ಅಥವಾ ವರ್ತನೆಯಾದ ತಮ್ಮ ಚರ್ಯೆಯನ್ನು ಹೇಗೆ ಅನುಸರಿಸುತ್ತಿದ್ದರು ಎಂದು ಕೆಲವರು ಶಂಕಿಸಬಹುದು. ಈ ನಿಟ್ಟಿನಲ್ಲಿ ವಸ್ತುಸ್ಥಿತಿ ಏನೆಂದರೆ ಪವಿತ್ರ ಕುರ್‌ಆನ್ ಅಲ್ಲಾಹನ ವತಿಯಿಂದ ಬಂದಂತೆಯೇ ಅವರು ಯಾವುದನ್ನು ಆದೇಶಿಸುತ್ತಿದ್ದರೋ ಯಾವುದರಿಂದ ತಡೆಯುತ್ತಿದ್ದರೋ ಮತ್ತು ಯಾವ ವಿಧಾನವನ್ನು ನಿಶ್ಚಯಿಸುತ್ತಿದ್ದರೋ ಅದೂ ಅಲ್ಲಾಹನ ವತಿಯಿಂದಲೇ ಆಗಿರುತ್ತಿತ್ತು. ಇದನ್ನು ಪ್ರವಾದಿ ಚರ್ಯೆ ಎನ್ನುತ್ತಾರೆ. ಎಲ್ಲಾ ಸತ್ಯವಿಶ್ವಾಸಿಗಳು ಅದನ್ನು ಕಡ್ಡಾಯವಾಗಿ ಅನುಸರಿಸಬೇಕಾದಂತೆಯೇ ಅವರು ಸ್ವತಃ ಅದನ್ನು ಪಾಲಿಸುತ್ತಿದ್ದರು. ಯಾವುದಾದರೂ ವಿಷಯಕ್ಕೆ ಸಂಬಂಧಿಸಿದಂತೆ ಪ್ರವಾದಿ ಸಂಗಾತಿಗಳು ಅವರೊಡನೆ ಇದು ಅಲ್ಲಾಹನ ಆದೇಶವೋ ಅಥವಾ ಸ್ವತಃ ತಮ್ಮ ಅಭಿಪ್ರಾಯವೋ ಎಂದು ಕೇಳುತ್ತಿದ್ದರು. ಅದಕ್ಕೆ ಅವರು ಇದು ಅಲ್ಲಾಹನ ಆದೇಶವಲ್ಲ, ನನ್ನ ಅಭಿಪ್ರಾಯವೆಂದು ಹೇಳಿದರೆ ಪ್ರವಾದಿ ಸಂಗಾತಿಗಳು ಅವರ

ಅಭಿಪ್ರಾಯಕ್ಕೆ ವಿರುದ್ಧವಾಗಿ ತಮ್ಮ ಸಲಹೆಗಳನ್ನು ನೀಡುತ್ತಿದ್ದರು. ಪ್ರವಾದಿಯವರು(ಸ) ತಮ್ಮ ಅಭಿಪ್ರಾಯವನ್ನು ಕೈಬಿಟ್ಟು ಅವರ ಸಲಹೆಯನ್ನು ಸ್ವೀಕರಿಸಿಕೊಳ್ಳುತ್ತಿದ್ದರು. ಇದರಿಂದ ಪ್ರಸ್ತುತ ವಿಷಯ ಸ್ಪಷ್ಟವಾಗುತ್ತದೆ. ಹಾಗೆಯೇ ಕೆಲವು ಸಂದರ್ಭದಲ್ಲಿ ಅವರು ಯಾವುದಾದರೂ ವಿಷಯದಲ್ಲಿ ಅನುಚರರೊಂದಿಗೆ ಸಮಾಲೋಚನೆ ನಡೆಸುತ್ತಿದ್ದರು. ಈ ಸಮಾಲೋಚನೆಯೇ ಈ ವಿಷಯದಲ್ಲಿ ದೇವನ ವತಿಯಿಂದ ಯಾವುದೇ ಆಜ್ಞೆ ಬಂದಿಲ್ಲವೆಂಬುದಕ್ಕೆ ಸಾಕ್ಷಿಯಾಗಿದೆ. ಏಕೆಂದರೆ ದೇವನ ಆಜ್ಞೆ ಬಂದಿದ್ದರೆ ಸಮಾಲೋಚನೆ ಮಾಡಬೇಕಾದ ಅಗತ್ಯವೇ ಇರುತ್ತಿರಲಿಲ್ಲ. ಇಂತಹ ಅನೇಕ ಘಟನೆಗಳು ಪ್ರವಾದಿಯವರ(ಸ) ಕಾಲದಲ್ಲಿ ಆಗಾಗ ನಡೆದಿರುವ ಬಗ್ಗೆ ಹದೀಸ್‌ನಲ್ಲಿ ನಮಗೆ ವಿವರಗಳು ಸಿಗುತ್ತವೆ. ನಾವು ಪ್ರವಾದಿಯವರಿಗಿಂತ(ಸ) ಹೆಚ್ಚು ಸಮಾಲೋಚನೆ ನಡೆಸುವವರನ್ನು ಕಂಡಿಲ್ಲ ಎಂದು ಪ್ರವಾದಿ ಸಂಗಾತಿಗಳು ಹೇಳಿರುವರು. ಅಲ್ಲಾಹನ ಸ್ಪಷ್ಟ ಆದೇಶವಿಲ್ಲದಂತಹ ವಿಚಾರಗಳಲ್ಲಿ ಸಮಾಲೋಚನೆ ನಡೆಸುವುದು ಪ್ರವಾದಿಯವರ(ಸ) ಚರ್ಯೆಯೇ ಆಗಿತ್ತು ಎಂದು ಇದರಿಂದ ನಮಗೆ ತಿಳಿದು ಬರುತ್ತದೆ. ಹೀಗೆ ಇತರರ ಮಾತಂತಿರಲಿ ಸ್ವಯಂ ಅಲ್ಲಾಹನ ಪ್ರವಾದಿಯೂ ತಮ್ಮ ವೈಯಕ್ತಿಕ ಅಭಿಪ್ರಾಯವನ್ನು ಜನರ ಮೇಲೆ ಹೇರುವಂತಿರಲಿಲ್ಲ. ಪ್ರವಾದಿಯವರು(ಸ) ಪರಸ್ಪರ ಸಮಾಲೋಚನೆ ಮಾಡಿ ಕಾರ್ಯ ನಿರ್ವಹಿಸುವ ತರಬೇತಿಯನ್ನು ಸಮುದಾಯಕ್ಕೆ ನೀಡಿದರು. ಅಲ್ಲಾಹನ ಸ್ಪಷ್ಟ ಆದೇಶವಿಲ್ಲದಂತಹ ವಿಚಾರಗಳಲ್ಲಿ ಅಭಿಪ್ರಾಯ ಸ್ವಾತಂತ್ರ್ಯವನ್ನು ನಿಸ್ಸಂಕೋಚವಾಗಿ ಉಪಯೋಗಿಸಬೇಕು ಎಂದು ಪ್ರವಾದಿ(ಸ) ಅವರು ಉಪದೇಶಿಸಿದರು.

## ಸ್ವಾತಂತ್ರ್ಯದ ನೈಜ ಸನದು

ಮಾನವಕುಲಕ್ಕೆ ಸ್ವಾತಂತ್ರ್ಯದ ಈ ಸನದನ್ನು ಸತ್ಯಧರ್ಮದ ಹೊರತು ಮತ್ತಾರೂ ನೀಡಿಲ್ಲ. ಅಲ್ಲಾಹನ ದಾಸರು ಅವನ ವಿನಾ ಮತ್ತಾರ ದಾಸರೂ ಆಗಬಾರದು. ಎಲ್ಲಿಯ ವರೆಗೆಂದರೆ ಪ್ರವಾದಿಗಳ ದಾಸರೂ ಆಗಬಾರದು. ಹೀಗೆ ಅದು ಮನುಷ್ಯನನ್ನು ದೇವನ ಹೊರತು ಬೇರೆಲ್ಲರ ದಾಸ್ಯದಿಂದ ಮುಕ್ತಗೊಳಿಸಿತು. ಅದರ ಜೊತೆಗೆ ಈ ಸಂದೇಶ ಮಾನವಕುಲಕ್ಕೆ ನೀಡಿದ ಒಂದು ಉತ್ಕೃಷ್ಟ ಅನುಗ್ರಹವು ಕಾನೂನಿನ ಸಾರ್ವಭೌಮತೆ ಯಾಗಿದೆ. ಆ ಕಾನೂನನ್ನು ಮುರಿಯುವ, ತಿದ್ದುವ ಅಥವಾ ಮಾರ್ಪಾಟು ಮಾಡುವ ಹಕ್ಕು ಯಾವುದೇ ರಾಜನಿಗಾಗಲಿ, ಸರ್ವಾಧಿಕಾರಿಗಾಗಲಿ, ಪ್ರಜಾಸತ್ತಾತ್ಮಕ ಶಾಸನ

ಸಭೆಗಾಗಲಿ ಅಥವಾ ಇಸ್ಲಾಮ್ ಸ್ವೀಕರಿಸಿದ ಒಂದು ಜನ ವಿಭಾಗಕ್ಕಾಗಲಿ ಇಲ್ಲ. ಈ ಕಾನೂನು ಒಳಿತು-ಕೆಡುಕುಗಳ ಶಾಶ್ವತ ಮೌಲ್ಯ(Permanent Values)ಗಳನ್ನು ಮನುಷ್ಯನಿಗೆ ಕರುಣಿಸುತ್ತದೆ. ಅದನ್ನು ಮಾರ್ಪಡಿಸಿ ಯಾರಿಗೂ ಒಳಿತನ್ನು ಕೆಡುಕಾಗಿಯೂ ಕೆಡುಕನ್ನು ಒಳಿತಾಗಿಯೂ ಪರಿವರ್ತಿಸಲು ಸಾಧ್ಯವಿಲ್ಲ.

ಪ್ರವಾದಿವರ್ಯರು(ಸ) ದೇವನ ದಾಸರ ಮುಂದೆ ಸಮರ್ಪಿಸಿದ ಮತ್ತೊಂದು ವಿಷಯ ನೀವು ದೇವನ ಮುಂದೆ ವಿಚಾರಣಾರ್ಹರು ಎಂಬುದಾಗಿತ್ತು. ಯಾರೂ ಕೇಳುವವರಿಲ್ಲದಂತೆ ಸ್ವೇಚ್ಛಾವಿಹಾರಿಗಳಾಗಿ ವರ್ತಿಸಲು ಮತ್ತು ಸಿಕ್ಕ ಸಿಕ್ಕ ಹೊಲವನ್ನೆಲ್ಲಾ ಮೇಯಲು ಈ ಜಗತ್ತಿನಲ್ಲಿ ನಿಮ್ಮನ್ನು ನಿರಂಕುಶವಾಗಿ ಬಿಟ್ಟು ಬಿಡಲಾಗಿಲ್ಲ. ಬದಲಾಗಿ ನಿಮ್ಮ ಪ್ರತಿಯೊಂದು ನಡೆ-ನುಡಿಯ ಬಗ್ಗೆ ಮತ್ತು ಸ್ವತಂತ್ರ ಜೀವನದ ಎಲ್ಲಾ ಕರ್ಮಗಳ ಬಗ್ಗೆಯೂ ನಿಮ್ಮ ಸೃಷ್ಟಿಕರ್ತನಾದ ಒಡೆಯನಿಗೆ ಲೆಕ್ಕ ಸಮರ್ಪಿಸಬೇಕಾಗುವುದು. ಮರಣಾನಂತರ ನೀವು ಪುನಃ ನಿಮ್ಮ ಪ್ರಭುವಿನ ಮುಂದೆ ವಿಚಾರಣೆಗೆ ಒಳಪಡಲಿಕ್ಕಾಗಿ ಎದ್ದೇಳಬೇಕಾಗುವುದು.

ಈ ಪ್ರಬಲ ನೈತಿಕ ಶಕ್ತಿ ಒಬ್ಬನ ಮನಸ್ಸಿನಲ್ಲಿ ಜಾಗೃತವಾದರೆ ಅವನ ಪರಿಸ್ಥಿತಿ ಕೆಡುಕಿನ ಎಲ್ಲ ಸಂಕಲ್ಪಗಳ ವೇಳೆಯೂ ಅವನನ್ನು ಶಪಿಸುವ ಮತ್ತು ಪ್ರತಿ ಹೆಜ್ಜೆಯಿಂದಲೂ ಅವನನ್ನು ತಡೆಯುವ ಕಾವಲುಗಾರನೊಬ್ಬ ಸದಾ ಅವನ ಜೊತೆಗಿದ್ದಂತಾಗುವುದು. ಬಂಧಿಸುವಂತಹ ಪೊಲೀಸರು ಮತ್ತು ದಂಡಿಸುವಂತಹ ಸರ್ಕಾರ ಬಾಹ್ಯವಾಗಿ ಅಸ್ತಿತ್ವದಲ್ಲಿದ್ದರೂ ಇಲ್ಲದಿದ್ದರೂ ಒಳಗೇ ಇರುವ ಪರೀಕ್ಷಕನ ಭಯದಲ್ಲಿ ಅವನು ಏಕಾಂಗಿಯಾಗಿದ್ದರೂ ಕಾಡಿನಲ್ಲಿದ್ದರೂ ಕಗ್ಗತ್ತಲಲ್ಲಿದ್ದರೂ ನಿರ್ಜನ ವಾತಾವರಣದಲ್ಲಿದ್ದರೂ ದೇವನಿಗೆ ಎಂದೂ ಅವಿಧೇಯನಾಗಿರಲಾರ. ಮನುಷ್ಯನ ನೈತಿಕ ಸುಧಾರಣೆ ಮತ್ತು ಚಾರಿತ್ರ್ಯ ನಿರ್ಮಾಣಕ್ಕೆ ಇದಕ್ಕಿಂತ ಉತ್ತಮ ವಿಧಾನ ಬೇರೊಂದಿಲ್ಲ. ಉಳಿದ ಯಾವ ವಿಧಾನದ ಮೂಲಕ ಚಾರಿತ್ರ್ಯವನ್ನು ನೀವು ಸಿಂಗರಿಸಬಯಸಿದರೂ - "ಒಳಿತು ಪ್ರಯೋಜನದಾಯಕ, ಕೆಡುಕು ನಷ್ಟಕಾರಕ" ಮತ್ತು "ಪ್ರಾಮಾಣಿಕತೆ ಉತ್ತಮ ಧೋರಣೆಯಾಗಿದೆ" ಎನ್ನುವುದಕ್ಕಿಂತ ಮುಂದುವರಿಯಲಾರಿರಿ. ಕೆಡುಕು ಮತ್ತು ಅಪ್ರಾಮಾಣಿಕತೆಯು ಒಂದು ಧೋರಣೆಯೆಂಬ ನೆಲೆಯಲ್ಲಿ ಲಾಭದಾಯಕವೆಂದು ಮನಗಂಡರೆ ಅದನ್ನು ನಿಸ್ಸಂಕೋಚವಾಗಿ ಮಾಡಿಬಿಡಬೇಕೆಂಬುದೇ ಇದರ ಅರ್ಥ. ಈ ದೃಷ್ಟಿಕೋನದಿಂದಾಗಿಯೇ ತಮ್ಮ ವೈಯಕ್ತಿಕ

ಜೀವನದಲ್ಲಿ ಸನ್ನಡತೆಯುಳ್ಳವರೂ ಸಾರ್ವಜನಿಕ ಜೀವನದಲ್ಲಿ ನಿಕೃಷ್ಟ ಮಟ್ಟದ ಅಪ್ರಾಮಾಣಿಕ, ಮೋಸಗಾರ, ಲೂಟಿಕೋರ ಮತ್ತು ಅಕ್ರಮಿಗಳಾಗಿ ಮಾರ್ಪಡುತ್ತಾರೆ, ವೈಯಕ್ತಿಕ ಜೀವನದಲ್ಲೂ ಅವರು ಕೆಲವು ವಿಷಯಗಳಲ್ಲಿ ಒಳ್ಳೆಯವರಾದರೆ ಕೆಲವದರಲ್ಲಿ ಕೆಟ್ಟವರಾಗಿರುತ್ತಾರೆ. ಒಂದೆಡೆ ಅವರು ಉತ್ತಮ ವ್ಯವಹಾರ ನಡೆಸುವವರೂ ಸದ್ವರ್ತನೆ ಕೈಗೊಳ್ಳುವವರೂ ಆಗಿದ್ದರೆ ಇನ್ನೊಂದೆಡೆ ಕುಡುಕ, ವ್ಯಭಿಚಾರಿ, ಜೂಜುಕೋರ ಮತ್ತು ಪಾಪಿಯಾಗಿರುತ್ತಾರೆ. ಮನುಷ್ಯನ ಸಾಮಾಜಿಕ ಜೀವನವೇ ಬೇರೆ, ವೈಯಕ್ತಿಕ ಜೀವನವೇ ಬೇರೆ ಎಂಬುದು ಅವರ ಅಂಬೋಣ. ಅವರ ವೈಯಕ್ತಿಕ ಜೀವನದ ಯಾವುದಾದರೂ ದೋಷದ ಬಗ್ಗೆ ಯಾರಾದರೂ ಗಮನ ಸೆಳೆದರೆ "ನೀನು ನಿನ್ನದನ್ನು ನೋಡಿಕೋ" ಎಂದು ಬಡಬಡಿಸುತ್ತಾರೆ.

ಇದಕ್ಕೆ ತದ್ವಿರುದ್ಧವಾಗಿ ಪರಲೋಕದ ಮೇಲಿನ ವಿಶ್ವಾಸವು ಕೆಡುಕು ಎಲ್ಲ ಸಂದರ್ಭಗಳಲ್ಲೂ ಕೆಡುಕಾಗಿದೆ ಎಂದು ಸಾರುತ್ತದೆ. ಜಗತ್ತಿನಲ್ಲಿ ಅದು ಪ್ರಯೋಜನದಾಯಕವಾಗಿದ್ದರೂ ಹಾನಿಕಾರಕವಾಗಿದ್ದರೂ ಸರಿಯೇ. ಪರಲೋಕದ ಉತ್ತರದಾಯಿತ್ವದ ಬಗ್ಗೆ ವಿಶ್ವಾಸವಿರಿಸುವವನ ಜೀವನದಲ್ಲಿ ವೈಯಕ್ತಿಕ ಮತ್ತು ಸಾಮಾಜಿಕ ಜೀವನವೆಂಬ ವಿಂಗಡನೆ ಇರುವುದಿಲ್ಲ. ಪ್ರಾಮಾಣಿಕತೆಯನ್ನು ಅವನು ಅಂಗೀಕರಿಸುವುದು ಅದೊಂದು ಒಳ್ಳೆಯ ಧೋರಣೆ ಎಂಬ ನೆಲೆಯಲ್ಲಲ್ಲ. ಪ್ರಾಮಾಣಿಕತೆ ಅವನ ಅಸ್ತಿತ್ವದಲ್ಲೇ ಲೀನವಾಗಿರುತ್ತದಲ್ಲದೆ ಅಪ್ರಾಮಾಣಿಕ ಕೆಲಸ ಮಾಡುವುದನ್ನು ಅವನಿಗೆ ಊಹಿಸಲಿಕ್ಕೂ ಸಾಧ್ಯವಿಲ್ಲ. ಅಪ್ರಾಮಾಣಿಕತೆಯಿಂದ ವರ್ತಿಸಿದರೆ ನೀವು ಪ್ರಾಣಿಗಳಿಗಿಂತಲೂ ಕೀಳಾಗಿ ಬಿಡುತ್ತೀರಿ ಎಂದು ಅವನ ವಿಶ್ವಾಸ ಅವನಿಗೆ ಕಲಿಸುತ್ತದೆ. ಪವಿತ್ರ ಕುರ್‌ಆನ್ ಹೇಳುತ್ತದೆ:

"ನಿಶ್ಚಯವಾಗಿಯೂ ನಾವು ಮನುಷ್ಯನನ್ನು ಅತ್ಯುತ್ತಮ ಪ್ರಕೃತಿಯಲ್ಲಿ ಸೃಷ್ಟಿಸಿದೆವು. ಆ ಮೇಲೆ ಅವನನ್ನು ಅಧೋಗತಿಯ ಪಾತಾಳಕ್ಕೆ ತಳ್ಳಿ ಬಿಟ್ಟೆವು."

ಹೀಗೆ ಪ್ರವಾದಿಯವರ(ಸ) ಮಾರ್ಗದರ್ಶನದ ಮೂಲಕ ಮಾನವಕುಲಕ್ಕೆ ಶಾಶ್ವತ ಮೌಲ್ಯಗಳುಳ್ಳ, ಮಾರ್ಪಡಿಸಲಾಗದ ಕಾನೂನು ಪ್ರಾಪ್ತವಾಗುವುದರ ಜೊತೆಗೆ ವೈಯಕ್ತಿಕ ಮತ್ತು ರಾಷ್ಟ್ರೀಯ ನೈತಿಕತೆಯ ಸುಭದ್ರ ಬುನಾದಿಯೂ ದೊರೆಯಿತು. ಸರ್ಕಾರ, ಪೊಲೀಸರು ಮತ್ತು ನ್ಯಾಯಾಲಯ ಅಸ್ತಿತ್ವದಲ್ಲಿದ್ದರೆ ಮಾತ್ರ ಸನ್ಮಾರ್ಗದಲ್ಲಿ ನಡೆಯುವ,

ಇಲ್ಲದಿದ್ದರೆ ಅಕ್ರಮಿಯಾಗಿ ಬಿಡುವಂತಹ ನಿರ್ಬಂಧ ಅದರಲ್ಲಿಲ್ಲ.

## ಸನ್ಯಾಸಕ್ಕೆ ಪ್ರತಿಯಾಗಿ ಲೌಕಿಕತೆಯಲ್ಲಿ ನೀತಿ ಪಾಲನೆ

ನೈತಿಕತೆ ಇರುವುದು ಸನ್ಯಾಸಿಗಳ ಆಶ್ರಮ ಅಥವಾ ದರವೇಶಿಯ ಧರ್ಮ ಶಾಲೆಗಳಿಗೆ ಮಾತ್ರವಲ್ಲ. ಬದಲಾಗಿ ಜೀವನದ ಎಲ್ಲ ರಂಗಗಳಲ್ಲೂ ಪಾಲಿಸಲಿಕ್ಕಾಗಿದೆ ಎಂಬುದು ಪ್ರವಾದಿಯವರ(ಸ) ಸಂದೇಶದ ಮತ್ತೊಂದು ಪ್ರಮುಖ ಬೋಧನೆ. ಯಾವ ಆಧ್ಯಾತ್ಮಿಕ ಮತ್ತು ನೈತಿಕ ಮೇಲ್ಮೆಯನ್ನು ಜಗತ್ತು ಸಾಧು ಸಂತರಲ್ಲಿ ಶೋಧಿಸುತ್ತದೋ ಅದನ್ನು ಪ್ರವಾದಿಯವರು(ಸ) ಅಧಿಕಾರದ ಗದ್ದುಗೆ ಮತ್ತು ನ್ಯಾಯಾಲಯದ ಪೀಠಕ್ಕೆ ಎಳೆತಂದರು. ವ್ಯಾಪಾರ ವಹಿವಾಟಿನಲ್ಲಿ ದೇವಭಯ ಮತ್ತು ಪ್ರಾಮಾಣಿಕತೆಯನ್ನು ಪಾಲಿಸುವುದನ್ನು ಅವರು ಕಲಿಸಿದರು. ಪೋಲೀಸರಿಗೂ ಸೈನಿಕರಿಗೂ ದೇವಭಯ ಮತ್ತು ಸತ್ಯಸಂಧತೆಯನ್ನು ಬೋಧಿಸಿದರು. ಲೋಕದಿಂದ ವಿರಕ್ತನಾಗಿ ದೇವನಾಮವನ್ನು ಜಪಿಸುವವನು ದೇವನ ಆಪ್ತನಾಗುತ್ತಾನೆ ಎಂಬ ತಪ್ಪು ತಿಳುವಳಿಕೆಯನ್ನು ಅವರು ತಿದ್ದಿದರು. ಒಬ್ಬ ವ್ಯಕ್ತಿ ಅಧಿಕಾರಿ, ನ್ಯಾಯಾಧೀಶ, ಸೇನಾನಿ, ಆರಕ್ಷಕ, ವ್ಯಾಪಾರಿ, ಉದ್ಯಮಿಯೇ ಮುಂತಾದ ನೆಲೆಗಳಲ್ಲಿ ಲೌಕಿಕ ವ್ಯವಹಾರಗಳಲ್ಲಿ ಸಂಪೂರ್ಣ ನಿರತನಾಗಿರುವವನಾಗಿಯೇ ತನ್ನ ವಿಶ್ವಾಸ ಪರೀಕ್ಷೆ ಗೊಳಪಟ್ಟಾಗಲೆಲ್ಲಾ ತನ್ನನ್ನು ಸತ್ಯಸಂಧ ಮತ್ತು ಪ್ರಾಮಾಣಿಕ ಎಂದು ಸಾಬೀತು ಪಡಿಸುವುದೇ ದೇವನೊಂದಿಗಿರುವ ಆಪ್ತತೆಯನ್ನು ಸೂಚಿಸುತ್ತದೆ ಎಂದು ಅವರು ಹೇಳಿದರು. ಹೀಗೆ ಅವರು ಆಧ್ಯಾತ್ಮಿಕತೆ ಮತ್ತು ನೈತಿಕತೆಯನ್ನು ಸನ್ಯಾಸದ ಬಂಧನ ದಿಂದ ಮುಕ್ತಗೊಳಿಸಿ ಅದನ್ನು ಆರ್ಥಿಕ, ಸಾಮಾಜಿಕ ಮತ್ತು ರಾಜಕೀಯ ರಂಗ ಗಳಿಗೆ ತಂದರು. ನ್ಯಾಯಾಲಯ ಹಾಗೂ ಸಂಧಾನ ಮತ್ತು ಯುದ್ಧ ರಂಗಗಳಲ್ಲಿ ಅದನ್ನು ಅಳವಡಿಸಿದರು. ಈ ಎಲ್ಲಾ ರಂಗಗಳಲ್ಲೂ ಪಾವನ ಚಾರಿತ್ರ್ಯದ ಆಧಿಪತ್ಯವನ್ನು ಸ್ಥಾಪಿಸಿದರು.

## ಪ್ರವಾದಿಯ ಮಾರ್ಗದರ್ಶನದ ಸತ್ಫಲಗಳು

ಈ ಮಾರ್ಗದರ್ಶನದ ಫಲವಾಗಿಯೇ ಪ್ರವಾದಿತ್ವದ ಆರಂಭ ಕಾಲದಲ್ಲಿ ಡಕಾಯಿತರಾಗಿದ್ದಂತಹ ವ್ಯಕ್ತಿಗಳನ್ನು ಪ್ರವಾದಿಯವರು(ಸ) ಪ್ರಾಮಾಣಿಕರಾಗಿಯೂ ದೇವನ ಸೃಷ್ಟಿಗಳ ಪ್ರಾಣ, ಮಾನ ಮತ್ತು ಸೊತ್ತಿನ ಸಂರಕ್ಷಕರನ್ನಾಗಿಯೂ ಮಾಡಿ

ಹೊರಟು ಹೋದರು. ಮೊದಲು ಜನರ ಹಕ್ಕುಗಳ ಭಂಜಕರಾಗಿದ್ದವರನ್ನು ಅವರು(ಸ) ಹಕ್ಕನ್ನು ನೀಡುವ, ಸಂರಕ್ಷಿಸುವ ಮತ್ತು ಗಳಿಸಿಕೊಡುವವರನ್ನಾಗಿ ಮಾಡಿ ಹೊರಟು ಹೋದರು. ಅವರಿಗಿಂತ ಮುಂಚೆ ಶೋಷಣೆ ಮತ್ತು ದಬ್ಬಾಳಿಕೆಯ ಮೂಲಕ ಪ್ರಜೆಗಳನ್ನು ಅಧೀನದಲ್ಲಿಡುತ್ತಿದ್ದ ಮತ್ತು ಉನ್ನತ ಮಹಲುಗಳಲ್ಲಿ ವಾಸ್ತವ್ಯ ಹೂಡಿ ತಾವೇ ದೇವಾಂಶ ಸಂಭೂತರೆಂದು ವಾದಿಸುತ್ತಿದ್ದ ರಾಜರುಗಳನ್ನು ಮಾತ್ರ ಜಗತ್ತು ಕಂಡರಿತಿತ್ತು. ಅವರು(ಸ) ಪೇಟೆಗಳಲ್ಲಿ ಜನಸಾಮಾನ್ಯರಂತೆ ಸಂಚರಿಸುವ ಮತ್ತು ನ್ಯಾಯದ ಮೂಲಕ ಪ್ರಜೆಗಳ ಹೃದಯವನ್ನು ಗೆಲ್ಲುವ ಆಡಳಿತಗಾರರನ್ನು ಜಗತ್ತಿಗೆ ಪರಿಚಯಿಸಿದರು. ಒಂದು ರಾಷ್ಟ್ರದೊಳಕ್ಕೆ ನುಗ್ಗಿದರೆ ಸಾರ್ವತ್ರಿಕ ಹತ್ಯಾಕಾಂಡ ನಡೆಸುತ್ತಿದ್ದ, ಪೌರ ನೆಲೆಗಳಿಗೆ ಕೊಳ್ಳಿ ಇಡುತ್ತಿದ್ದ ಮತ್ತು ಜಯಿಸಲ್ಪಟ್ಟವರಿಗೆ ಸೇರಿದ ಮಹಿಳೆಯರ ಮಾನಹರಣ ಮಾಡುತ್ತಿದ್ದ ಸೈನಿಕರನ್ನು ಮಾತ್ರ ಅವರಿಗಿಂತ ಮುಂಚೆ ಜಗತ್ತು ಕಂಡರಿತಿತ್ತು. ಅವರು(ಸ) ವಿಜಯ ಪತಾಕೆಯೊಂದಿಗೆ ಯಾವುದೇ ನಗರವನ್ನು ಪ್ರವೇಶಿಸಿದರೆ ಶತ್ರು ಸೈನ್ಯದ ಹೊರತು ಬೇರೆ ಯಾರ ಮೇಲೆಯೂ ಹಸ್ತಕ್ಷೇಪ ಮಾಡದ ಮತ್ತು ಜಯಿಸಲ್ಪಟ್ಟ ನಗರದಿಂದ ಹಿಂದಿರುಗುವುದಾದರೆ ನಗರವಾಸಿಗಳಿಂದ ವಸೂಲು ಮಾಡಿದ ತೆರಿಗೆಯನ್ನೂ ಅವರಿಗೆ ಮರಳಿಸುವ ಸೈನಿಕರನ್ನು ಜಗತ್ತಿಗೆ ಪರಿಚಯಿಸಿದರು. ಮಾನವನ ಇತಿಹಾಸ, ನಗರ ಮತ್ತು ರಾಷ್ಟ್ರಗಳ ವಿಜಯದ ಇತಿಹಾಸದಿಂದ ತುಂಬಿದೆ. ಆದರೆ ಮಕ್ಕಾ ವಿಜಯ ಇತಿಹಾಸದ ಅನುಪಮ ಘಟನೆಯಾಗಿದೆ. ಯಾವ ನಗರದ ವಾಸಿಗಳು ಪ್ರವಾದಿಯವರ(ಸ) ಮೇಲೆ ಹದಿಮೂರು ವರ್ಷಗಳ ಕಾಲ ನಿರಂತರ ಶೋಷಣೆ ಮಾಡಿದ್ದರೋ ಆ ನಗರಕ್ಕೆ ಅವರು ವಿಜಯಿಯಾಗಿ ಪ್ರವೇಶಿಸಿದಾಗ ಅವರ ಶಿರ ದೇವನ ಮುಂದೆ ಬಾಗಿತ್ತು. ಹಣೆ ಒಂಟೆಯ ಜೀನಿಗೆ ತಾಗುತ್ತಿತ್ತು. ಅವರ ವರ್ತನೆಯಲ್ಲಿ ಜಂಬ ಅಥವಾ ದರ್ಪದ ಲವಲೇಶ ಲಕ್ಷಣವೂ ಇರಲಿಲ್ಲ. ಹದಿಮೂರು ವರ್ಷಗಳ ಕಾಲ ಅವರನ್ನು ಹಿಂಸಿಸಿದ, ಅವರನ್ನು ವಲಸೆ ಹೋಗಲಿಕ್ಕಾಗಿ ನಿರ್ಬಂಧಿಸಿದ ಮತ್ತು ವಲಸೆ ಹೋದ ಬಳಿಕವೂ ಎಂಟು ವರ್ಷಗಳ ಕಾಲ ಅವರ ವಿರುದ್ಧ ಯುದ್ಧ ಹೂಡಿದ ಜನರು ಅವರ ಅಧೀನಕ್ಕೊಳಪಟ್ಟಾಗ, ಅವರು ಪ್ರವಾದಿಯವರಲ್ಲಿ(ಸ) ಕ್ಷಮೆ ಮತ್ತು ಸುರಕ್ಷೆಗಾಗಿ ಮೊರೆ ಇಟ್ಟರು. ಅವರು ಪ್ರತೀಕಾರ ತೀರಿಸುವುದನ್ನು ಬಿಟ್ಟು ಹೀಗೆ ಹೇಳಿದರು:

"ಇಂದು ನಿಮ್ಮನ್ನು ಹಿಡಿಯಲಾಗುವುದಿಲ್ಲ. ಹೋಗಿ, ನೀವು ಸ್ವತಂತ್ರ

ರಾಗಿದ್ದೀರಿ."

ಪ್ರವಾದಿಯವರ(ಸ) ಈ ಮಾದರಿ ಅವರ ಸಮುದಾಯದ ಮೇಲೆ ಎಷ್ಟು ಪ್ರಭಾವ ಬೀರಿದೆ ಎಂದು ಯಾರಾದರೂ ಅಂದಾಜಿಸಬಯಸುವುದಾದರೆ ಮುಸ್ಲಿಮರು ಸ್ಪೈಯಿನ್‌ನೊಳಗೆ ಪ್ರವೇಶಿಸುವಾಗ ಯಾವ ರೀತಿ ಪ್ರವೇಶಿಸಿದರು. ಅದೇ ವೇಳೆ ಕ್ರೈಸ್ತರು ಅವರ ಮೇಲೆ ವಿಜಯ ಸಾಧಿಸಿದಾಗ ಅವರೊಂದಿಗೆ ಹೇಗೆ ವರ್ತಿಸಲಾಯಿತೆಂಬುದರ ಇತಿಹಾಸದ ಮೇಲೆ ಕಣ್ಣೋಡಿಸಲಿ. ಶಿಲುಬೆ ಯುದ್ಧದ ವೇಳೆ ಕ್ರೈಸ್ತರು 'ಬೈತುಲ್ ಮಕ್ದಿಸ್" ಪ್ರವೇಶಿಸಿದಾಗ ಅವರು ಮುಸ್ಲಿಮರೊಂದಿಗೆ ಯಾವ ರೀತಿ ವರ್ತಿಸಿದರು. ಅದೇ ವೇಳೆ ಮುಸ್ಲಿಮರು 'ಬೈತುಲ್ ಮಕ್ದಿಸ'ನ್ನು ಅವರಿಂದ ಮರಳಿ ಪಡೆದಾಗ ಕ್ರೈಸ್ತರೊಂದಿಗೆ ಹೇಗೆ ವರ್ತಿಸಿದರು ಎಂಬುದನ್ನು ಪರೀಕ್ಷಿಸಲಿ.

ಪ್ರವಾದಿಯವರ(ಸ) ಜೀವನ ಚರ್ಯೆ ಒಂದು ಮಹಾ ಸಾಗರವಾಗಿದೆ. ಒಂದು ಭಾಷಣದಲ್ಲಂತಿರಲಿ ಒಂದು ಉದ್ಗ್ರಂಥದಲ್ಲೂ ಅದನ್ನು ವಿವರಿಸಲು ಸಾಧ್ಯವಿಲ್ಲ. ಆದರೂ ಅದರ ಕೆಲವು ಸುವ್ಯಕ್ತ ಮುಖಗಳ ಬಗ್ಗೆ ಸಾಧ್ಯವಾದಷ್ಟರ ಮಟ್ಟಿಗೆ ಬೆಳಕು ಚೆಲ್ಲಲು ಪ್ರಯತ್ನಿಸಿದ್ದೇನೆ. ಸನ್ಮಾರ್ಗದರ್ಶನದ ಈ ಏಕೈಕ ಮೂಲದಿಂದ ಮಾರ್ಗದರ್ಶನವನ್ನು ಪಡೆಯುವವರು ನಿಜವಾಗಿಯೂ ಸುದೈವಿಗಳು.